**ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**

**ಕಾರ್ಯನಿರ್ವಾಹಕ ಇಂಜನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ.**

**ಟೆಂಡರ್ ಪ್ರಕಟಣೆ**

**No.EE/MID/BGM/AE/TND/2010-11/2465, Dated: 4th August 2010**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಕಾಯ್ದೆ ಅಧಿನಿಯಮ–2000ರ ಮತ್ತು ಇತ್ತೀಚಿನ ತಿದ್ದುಪಡಿಗಳಂತೆ, ಈ ಕೆಳಗಿನ ಕಾಮಗಾರಿಗಾಗಿ ಅರ್ಹ ಗುತ್ತಿಗೆದಾರರಿಂದ ಐಟಂ ದರದಂತೆ ಗುತ್ತಿಗೆಯನ್ನು "ಇ ಪ್ರೋಕ್ಯುರಮೆಂಟ್" ಮುಖಾಂತರ ಕಾರ್ಯನಿರ್ವಾಹಕ ಇಂಜನೀಯರರು ಸಣ್ಣ ನೀರಾವರಿ ವಿಭಾಗ, ಬೆಳಗಾವಿ ಇವರಿಂದ ಆವ್ಹಾನಿಸಲಾಗಿದೆ.

| ಕ್ರಮ ಸಂ. | ಕೆಲಸದ ಹೆಸರು | ಟೆಂಡರಿಗಿಟ್ಟ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇಡಗಂಟು ಮೊತ್ತ (ರೂ.ಗಳಲ್ಲಿ) | ಟೆಂಡರ್ ಫಾರ್ಮ ಬೆಲೆ (ರೂ.ಗಳಲ್ಲಿ) | ಕೆಲಸವನ್ನು ಮುಗಿಸುವ ಕಾಲಮಿತಿ ಮಳೆಗಾಲ ಸೇರಿ | ಷರಾ |
|---|---|---|---|---|---|---|
| | **Standard Tender Document KW-2 ರಂತೆ** | | | | | |
| 1 | ಬೆಳಗಾವಿ ಜಿಲ್ಲೆ ಸವದತ್ತಿ ತಾಲ್ಲೂಕಿನ ಹೂಲಿ ಗ್ರಾಮದ ಹತ್ತಿರ ಬ್ರಿಡ್ಜ ಕಂ ಬ್ಯಾರೇಜ್ ನಿರ್ಮಾಣ (Work Indent-1248) | 49.73 | 99500.00 | 1250/– | 6 ತಿಂಗಳು (ಮಳೆಗಾಲ ಸೇರಿ) | 1ನೇ ಕರೆ |
| 2 | ಬೆಳಗಾವಿ ಜಿಲ್ಲೆ ಅಥಣಿ ತಾಲ್ಲೂಕಿನ ಹಾಲಳ್ಳಿ ಗ್ರಾಮದ ಹತ್ತಿರದ ಇಂಗು ಕೆರೆ ನಿರ್ಮಾಣ (Work Indent-1299) | 37.53 | 75100.00 | 1250/– | 6 ತಿಂಗಳು (ಮಳೆಗಾಲ ಸೇರಿ) | 1ನೇ ಕರೆ |
| 3 | ಬೆಳಗಾವಿ ಜಿಲ್ಲೆ ಗೋಕಾಕ ತಾಲ್ಲೂಕಿನ ದಾಸನಟ್ಟಿ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ (Work Indent-1298) | 49.33 | 98700.00 | 1250/– | 6 ತಿಂಗಳು (ಮಳೆಗಾಲ ಸೇರಿ) | 1ನೇ ಕರೆ |
| 4 | ಬೆಳಗಾವಿ ಜಿಲ್ಲೆ ಗೋಕಾಕ ತಾಲ್ಲೂಕಿನ ವಡೆರಟ್ಟಿ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ (Work Indent-718/Call-5) | 27.13 | 54500.00 | 1250 | 4 ತಿಂಗಳು (ಮಳೆಗಾಲ ಸೇರಿ) | 5ನೇ ಕರೆ |

ಗುತ್ತಿಗೆದಾರರು ಕರ್ನಾಟಕ ಸರ್ಕಾರದ "ಇ ಪ್ರೋಕ್ಯೂರಮೆಂಟ್" ವೆಬಸೈಟ್ https://eproc.karnataka.gov.in ನಲ್ಲಿ ಲಾಗಿನ್ ಆಗಿ ದಿನಾಂಕ 12/**08/2010 ರಿಂದ Download** ಮಾಡಿಕೊಳ್ಳಬಹುದು.

ಕಾಮಗಾರಿ ಪಡೆಯಲು ಅರ್ಹತೆ ಷರತ್ತುಗಳು ಕಾಮಗಾರಿ ವಿವರ ಇತ್ಯಾದಿಗಳನ್ನು **ದಿ.6.9.2010ರ 17–30 ಘಂಟೆವರೆಗೆ** ವಿಭಾಗ ಕಛೇರಿಯಲ್ಲಿ ಅಥವಾ "ಇ–ಪ್ರೋಕ್ಯುರಮೆಂಟೆ" ಹೆಲ್ಪ ಡೆಸ್ಕನಿಂದ ಪಡೆಯಬಹುದು. 080–25501216/25201227.

ಟೆಂಡರ್‌ಗಳನ್ನು ಇ.ಎಂ.ಡಿ ಹಾಗೂ ಟೆಂಡರ್ ಶುಲ್ಕದೊಂದಿಗೆ (ವೆಬಸೈಟ್‌ನಲ್ಲಿ ನಿಗದಿ ಮಾಡಿರುವ ಯಾವುದಾದರು ಒಂದುಮಾದರಿಯಲ್ಲಿ ಆನ್ ಲೈನ್ ಪೇಮೆಂಟ್ ಮಾತ್ರ) 'ಇ–ಪ್ರೋಕ್ಯುರಮೆಂಟ್" ವೆಬಸೈಟ್ https://eproc.karnataka.gov.in ನಲ್ಲಿ ಲಾಗಿನ್ ಆಗಿ ದಿನಾಂಕ **10/9/2010ರ 16–00ಘಂಟೆವರೆಗೆ ಸ್ವೀಕರಿಸಲಾಗುವುದು. ಸದರಿ ಗುತ್ತಿಗೆಯನ್ನು 13.09.2010 ರಂದು ತೆರೆಯಲಾಗುವುದು. (ಸಾಧ್ಯವಾದಲ್ಲಿ)**

**ವ್ಹಿ.ಬಿ. ಕುಲಕರ್ಣಿ**

ಪಿ.ಆರ್. 621 ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ

**ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**

**ಕಾರ್ಯನಿರ್ವಾಹಕ ಇಂಜನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ.**

**ಟೆಂಡರ್ ಪ್ರಕಟಣೆ**

**No.EE/MID/BGM/AE/TND/2010-11/2466, Dated:- 4th August 2010**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಕಾಯ್ದೆ ಅಧಿನಿಯಮ–2000ರ ಮತ್ತು ಇತ್ತೀಚಿನ ತಿದ್ದುಪಡಿಗಳಂತೆ, ಈ ಕೆಳಗಿನ ಕಾಮಗಾರಿಗಾಗಿ ಅರ್ಹ ಗುತ್ತಿಗೆದಾರರಿಂದ ಐಟಂ ದರದಂತೆ ಗುತ್ತಿಗೆಯನ್ನು "ಇ

ಪ್ರೋಕ್ಯುರಮೆಂಟ್" ಮುಖಾಂತರ ಕಾರ್ಯನಿರ್ವಾಹಕ ಇಂಜನೀಯರರು ಸಣ್ಣ ನೀರಾವರಿ ವಿಭಾಗ, ಬೆಳಗಾವಿ ಇವರಿಂದ ಆಹ್ವಾನಿಸಲಾಗಿದೆ.

| ಕ್ರಮ ಸಂ. | ಕೆಲಸದ ಹೆಸರು | ಟೆಂಡರಿಗಿಟ್ಟ ಅಂದಾಜು ಮೊತ್ತ (ರೂ. ಗಳಲ್ಲಿ) | ಇ.ಎಂ.ಡಿ. ಮೊತ್ತ (ರೂ.ಗಳಲ್ಲಿ) | ಟೆಂಡರ ಶುಲ್ಕ (ರೂ.ಗಳಲ್ಲಿ) | ಕೆಲಸವನ್ನು ಮುಗಿಸುವ ಕಾಲಮಿತಿ ಮಳೆಗಾಲ ಸೇರಿ |
|---|---|---|---|---|---|
| | **Standard Tender Document KW–3 ರಂತೆ** | | | | |
| 1 | ಬೆಳಗಾವಿ ಜಿಲ್ಲೆ ಚಿಕ್ಕೋಡಿ ತಾಲ್ಲೂಕಿನ ಬೆಳಗಲಿ ಗ್ರಾಮದ ಹತ್ತಿರ ಹಿರೇಹಳ್ಳಕ್ಕೆ ಅಡ್ಡಲಾಗಿ ಬ್ರಿಡ್ಜ ಕಂ ಬ್ಯಾರೇಜ್ ನಿರ್ಮಾಣ (Work Indent-1216) | 54.05 | 10100.00 | 2500/– | 6 ತಿಂಗಳು (ಮಳೆಗಾಲ ಸೇರಿ) |
| 2 | ಬೆಳಗಾವಿ ಜಿಲ್ಲೆ ಗೋಕಾಕ ತಾಲ್ಲೂಕಿನ ಹಿರೇನಂದಿ ಗ್ರಾಮದ ಹತ್ತಿರ ಹಿರೇಹಳ್ಳಕ್ಕೆ ಅಡ್ಡಲಾಗಿ ಬ್ರಿಡ್ಜ ಕಂ ಬ್ಯಾರೇಜ್ ನಿರ್ಮಾಣ (Work Indent-1329) | 91.13 | 182500.00 | 2500/– | 6 ತಿಂಗಳು (ಮಳೆಗಾಲ ಸೇರಿ) |

ಗುತ್ತಿಗೆದಾರರು ಕರ್ನಾಟಕ ಸರ್ಕಾರದ "ಇ ಪ್ರೋಕ್ಯೂರಮೆಂಟ್" ವೆಬಸೈಟ್ https://eproc.karnataka.gov.in ನಲ್ಲಿ ಲಾಗಿನ್ ಆಗಿ ದಿನಾಂಕ **12/08/2010 ರಿಂದ Download** ಮಾಡಿಕೊಳ್ಳಬಹುದು.

ಕಾಮಗಾರಿ ಪಡೆಯಲು ಅರ್ಹತೆ ಷರತ್ತುಗಳು ಕಾಮಗಾರಿ ವಿವರ ಇತ್ಯಾದಿಗಳನ್ನು **ದಿ.6/9/2010ರ 17–30 ಘಂಟೆವರೆಗೆ** ವಿಭಾಗ ಕಛೇರಿಯಲ್ಲಿ ಅಥವಾ "ಇ–ಪ್ರೋಕ್ಯುರಮೆಂಟೆ" ಹೆಲ್ಪ ಡೆಸ್ಕ್‌ನಿಂದ ಪಡೆಯಬಹುದು. 080–25501216/25201227.

ಟೆಂಡರ್‌ಗಳನ್ನು ಇ.ಎಂ.ಡಿ ಹಾಗೂ ಟೆಂಡರ್ ಶುಲ್ಕದೊಂದಿಗೆ (ವೆಬಸೈಟ್‌ನಲ್ಲಿ ನಿಗದಿ ಮಾಡಿರುವ ಯಾವುದಾದರು ಒಂದು ಮಾದರಿಯಲ್ಲಿ ಆನ್ ಲೈನ್ ಪೇಮೆಂಟ್ ಮಾತ್ರ) 'ಇ–ಪ್ರೋಕ್ಯುರಮೆಂಟ್" ವೆಬಸೈಟ್ https://eproc.karnataka.gov.in ನಲ್ಲಿ ಲಾಗಿನ್ ಆಗಿ ದಿನಾಂಕ 10/9/2010ರ 16–00 ಗಂಟೆವರೆಗೆ ಸ್ವೀಕರಿಸಲಾಗುವುದು. ಸದರಿ ಗುತ್ತಿಗೆಗಳನ್ನು (ತಾಂತ್ರಿಕ ಬಿಡ್) 13.09.2010 ರಂದು ತೆರೆಯಲಾಗುವುದು. (ಸಾಧ್ಯವಾದಲ್ಲಿ)

**ವ್ಹಿ.ಬಿ. ಕುಲಕರ್ಣಿ**

ಪಿ.ಆರ್. 622 ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ

**WATER RESOURCES DEPARTMENT (MINOR IRRIGATION)**

**OFFICE OF THE EXECUTIVE ENGINEER M.I.DIVISION, BELGAUM.**

**TENDER NOTIFICATION**

**No.EE /MID/BGM/TND/AE/10-11/2470, Date: 4th August 2010**

As per KTTP Act-2000 and Amendment the Executive Engineer M.I Division Belgaum has invited the item rate tender for the following work in E-Procurement Portal System.

| Sl. No | Name of work | Amount put to tender (Rs. In lakhs) | Earnest Money Deposit (Rs.) | Tender Processing Fee (Rs.) | Period of completion (including monsoon) | Remarks |
|---|---|---|---|---|---|---|
| | (Standard Tender Document KW-4) | | | | | |
| 1 | Construction of Bridge Cum Barrage near Upparhatti Gokak Tq. Belgaum Dist. (Work Indent No.761/Call-2) | 121.10 | 200000.00 | 5000.00 | 9 months (including monsoon) | 2nd Call |
| 2 | Improvements to Bridge Cum Barrage across Ghataprabha River near Hunashyal Village in Gokak Tq. Belgaum Dist. (Work Indent No.1332) | 114.78 | 172500.00 | 5000.00 | 9 months (including monsoon) | 1st Call |

The Contractors may log-in and Download from Govt. of Karnataka E-Procurement Web Site https://eproc.karnataka.gov.in from **23/08/2010.**

The details of the works and other conditions may be obtained in the Division Office or E-Procurement Help Desk 080-25501216/25201227 up to 06/09/2010.

Date of Pre-tender meeting : 06-09-2010 (In the office of the Executive Engineer, M.I. Division, Belgaum at 11.00 AM

The Tender will be received along with Tender processing fee and E.M.D (as prescribed in the Web-Site in any one of the mode by on-line payment only.) in https://eproc.karnataka.gov.in on or before **15/09/2010 upto 16.00 hrs. The tenders (Technical Bid) will be opened on 18.09.2010 (If possible)**

**V.B.Kulkarni**

P.R. 623 Executive Engineer, M.I. Division, Belgaum.

**ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ ಇಲಾಖೆ)**

**ಕಾರ್ಯಪಾಲಕ ಅಭಿಯಂತರರವರ ಕಛೇರಿ, ಸಣ್ಣ ನೀರಾವರಿ ವಿಭಾಗ, ಬೆಂಗಳೂರು**

**ಪ್ರಕಟಣೆ ಸಂಖ್ಯೆ: 09/10–11, ದಿನಾಂಕ: 28ನೇ ಜುಲೈ 2010**

**ಐಟಂವಾರು ಟೆಂಡರ್**

1. ಕರ್ನಾಟಕ ರಾಜ್ಯದ ರಾಜ್ಯಪಾಲರ ಪರವಾಗಿ ಕಾರ್ಯಪಾಲಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೆಂಗಳೂರು ಇವರಿಂದ ಈ ಕೆಳಕಂಡ ಕಾಮಗಾರಿಗಳ ಅನುಷ್ಠಾನಕ್ಕಾಗಿ ಅರ್ಹ ಗುತ್ತಿಗೆದಾರರಿಂದ ಕರ್ನಾಟಕ ಸಾರ್ವಜನಿಕ ಸಂಗಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ –2000ರ ಸ್ಟ್ಯಾಂಡರ್ಡ ಟೆಂಡರ್ ಡಾಕ್ಯೂಮೆಂಟ್ ಕೆ ಡಬ್ಲ್ಯೂ–4 ರ ಸೂಚನೆ ಮತು ನಿಬಂಧನೆಗಳಿಗೆ ಒಳಪಟ್ಟು ಟೆಂಡರ್‌ಗಳನ್ನು ಇ.ಪ್ರೊಕ್ಯೂರ್‌ಮೆಂಟ್ ಪದ್ದತಿಯ ಮುಖಾಂತರ ಅಹ್ವಾನಿಸಲಾಗಿದೆ.
2. ವಿವರಗಳನ್ನು ಈ ಕಛೇರಿಯಿಂದ ಕೆಲಸದ ವೇಳೆಯಲ್ಲಿ ದಿ:31.08.2010 ರ ವರಗೆ ಪಡೆಯಬಹುದಾಗಿದೆ.
3. ಟೆಂಡರ್ ದಸ್ತಾವೇಜುಗಳನ್ನು ಇ.ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಮುಖಾಂತರ ಡೌನ್‌ಲೋಡ್ ಮಾಡಿಕೊಳ್ಳಬಹುದಾಗಿದ್ದು, ಭರ್ತಿ ಮಾಡಿದ ಟೆಂಡರ್‌ಗಳನ್ನು ಇ.ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಮುಖಾಂತರ ದಿನಾಂಕ 04.09.2010 ರ 16.00 ಗಂಟೆಯವರೆಗೆ ಸಲ್ಲಿಸಬಹುದಾಗಿದೆ.
4. ತಾಂತ್ರಿಕ ಬಿಡ್‌ನ್ನು ದಿ:07.09.2010 ರಂದು ಬೆಳಿಗ್ಗೆ 11.00 ಕ್ಕೆ ತೆರೆಯಲಾಗುವುದು.
5. ತಾಂತ್ರಿಕ ಬಿಡ್ ಅರ್ಹತೆಗೊಂಡ ಗುತ್ತಿಗೆದಾರರ ಆರ್ಥಿಕ ಬಿಡ್ಡನ್ನು ದಿ:15.09.2010 ರಂದು ಬೆಳಿಗ್ಗೆ11.00 ಕ್ಕೆ ತೆರೆಯಲಾಗುವುದು.
6. ಗುತ್ತಿಗೆ ಪಡೆಯಲು ಕನಿಷ್ಟ ಅರ್ಹತೆಗಳಿಗಾಗಿ ಸ್ಟ್ಯಾಂಡರ್ಡ ಟೆಂಡರ್ ಡಾಕ್ಯೂಮೆಂಟ್‌ರ ಐ.ಟಿ.ಟಿ. ನಿಬಂಧನೆ 2 ಮತ್ತು 3ರಲ್ಲಿ ನಮೂದಿಸಿದ ಸೂಚನೆಗಳನ್ನು ಸೂಕ್ಷ್ಮವಾಗಿ ಗಮನಿಸುವಂತೆ ಗುತ್ತಿಗೆದಾರರಿಗೆ ಸೂಚಿಸಲಾಗಿದೆ.
7. ಎಲ್ಲಾ ಟೆಂಡರನ್ನು ಅಥವಾ ಯಾವುದಾದರೂ ಟೆಂಡರನ್ನು ಮುಂದೂಡುವ ಅಥವಾ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಲಾಗಿದೆ.
8. ಹೆಚ್ಚಿನ ವಿವರಗಳನ್ನು ಇ.ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಮುಖಾಂತರ ವೆಬ್‌ಸೈಟ್ ವಿಳಾಸ https://www.eproc.karnataka.gov.in_ರಲ್ಲಿ ಪಡೆಯಬಹುದಾಗಿದೆ.

**ವಿವರ**

| ಪ್ಯಾಕೇಜ್ ಸಂ | ಇಂಡೆಂಟ್ ಸಂಖ್ಯೆ | ಕಾಮಗಾರಿಯ ಹೆಸರು | ಲೆಕ್ಕ ಶೀರ್ಷಿಕೆ | ಟೆಂಡರ್‌ಗೆ ಇಡಲಾದ ಅಂದಾಜು ಮೊತ್ತ (ರೂ.ಲಕ್ಷ) | ಇ.ಎಂ.ಡಿ. (ರೂ.ಗಳಲ್ಲಿ) | ಟೆಂಡರ್ ಪ್ರೊಸೆಸಿಂಗ್ ಫಿ (ರೂ.ಗಳಲ್ಲಿ) | ಕಾಮಗಾರಿ ಪೂರ್ಣಗೊಳಿಸಿದ ಅವಧಿ |
|---|---|---|---|---|---|---|---|
| 1 | 970 | ಬೆಂಗಳೂರು ನಗರ ಜಿಲ್ಲೆ ಆನೇಕಲ್ ತಾಲ್ಲೂಕು ಮೈಸೂರಮ್ಮನದೊಡ್ಡಿ (ಬಗ್ಗನ ದೊಡ್ಡಿ) ಕೆರೆ ಅಭಿವೃದ್ಧಿ ಕಾಮಗಾರಿ | 4702 ವಿಶೇಷ ಘಟಕ ಯೋಜನೆ | 141.46 | 2,13,000/– | 5000/– | 6 ತಿಂಗಳು (ಮಳೆಗಾಲ ಸೇರಿ) |

ಕಾರ್ಯಪಾಲಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೆಂಗಳೂರು.

**WATER RESOURCES DEPARTMENT ( MINOR IRRIGATION)**
**OFFICE OF THE EXECUTIVE ENGINEER, M.I.DIVISION, BANGALORE**
**Tender Notification No.09/10-11, dated 28th July 2010**
**(ITEM RATE TENDER)**

1. Executive Engineer, M.I.Division, Bangalore invites Tenders on behalf of Governor of Karnataka for the following work as per Karnataka transparency in public procurement ordinance act 2000 and standard tender document KW-4 through e-Procurement System.

2. Any information's regarding this tender may be obtained from this office up to 31.08.2010 during office hours
3. Tender documents may be downloaded and submitted through e-procurement portal upto 16.00 hours on dt. 04.09.2010
4. Technical bids of contractors for all the works will be opened on 07.09.2010 at 11.00 AM
5. Technically qualified contractor`s finanacial bid will be opened on 15.09.2010 at 11.00 AM
6. Tenderers are advised to note the minimum qualification criteria specified in clause 2 and 3 of ITT in Standard Tender document.
7. All the rights are reserved for postponement or cancellation of all or any tender.
8. Terms and conditions and other details can be obtained through e-procurement portal at the website address https://www.eproc.karnataka.gov.in

**TABLE**

| Package No. | Indent Number | Name of the work | Head of account | Approximate value of work (Rs. lakhs) | Earnest Money Deposit (Rs.) | Tender processing fee (Rs. | Period of completion |
|---|---|---|---|---|---|---|---|
| 1 | 970 | IMPROVEMENT WORKS TO MYSORAMMANA DODDI (BAGGANADODDI) TANK IN ANEKAL TALUK, BANGALORE URBAN DISTRICT. | 4702 (SCP) | 141.46 | 2,13,000/- | 5000/- | 6 months (including monsoon) |

Executive Engineer,
Minor Irrigation Division, Bangalore.

P.R. 619

**ಕರ್ನಾಟಕ ಅರಣ್ಯ ಇಲಾಖೆ**

**ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಭವನ, 18ನೇ ಅಡ್ಡರಸ್ತೆ,**

**ಮಲ್ಲೇಶ್ವರಂ, ಬೆಂಗಳೂರು–560 003**

**ಇ–ಟೆಂಡರ್ ಅಧಿಸೂಚನೆ**

**ಅಧಿಸೂಚನೆ ಸಂಖ್ಯೆ:ಪಿಸಿಸಿಎಫ್:ಸಿ:ಸಿಆರ್– 1/ಪಾ.ಚೀ/:2010–11, ದಿನಾಂಕ : 12ನೇ ಆಗಸ್ಟ್ 2010.**

**ವಿಷಯ :** ಪಾಲಿಥೀನ್ ಚೀಲ / **ಹಾಳೆ** / **ನೇಯ್ದ** ಚೀಲಗಳ ಪೂರೈಕೆಗಾಗಿ ಅರ್ಹತಾಪೂರ್ವ "ಇ" ಟೆಂಡರ್ ದರದ ಪ್ರಕಟಣೆ ಬಗ್ಗೆ

ಕರ್ನಾಟಕ ಅರಣ್ಯ ಇಲಾಖೆಯಲ್ಲಿ 2010–11 ನೇ ಸಾಲಿನಲ್ಲಿ ಅರಣ್ಯ ಸಸ್ಯಕ್ಷೇತ್ರದಲ್ಲಿ 01–09–2010 ರಿಂದ 31–08–2011ರವರೆಗಿನ ಅವಧಿಯಲ್ಲಿ ವಿವಿಧ ಅಳತೆಯ ಪಾಲಿಥೀನ್ ಚೀಲ / ಹಾಳೆ / ನೇಯ್ದ ಚೀಲಗಳನ್ನು ಸರಬರಾಜು ಮಾಡಲು ಭರವಸೆ ಹೊಂದಿದ ಉತ್ಪಾದಕರ ಸಂಭಾವ್ಯ ಪಟ್ಟಿಯನ್ನು ತಯಾರಿಸಲು ಆಸಕ್ತ ಎಲ್.ಡಿ.ಪಿ.ಇ. ಚೀಲ/ಹಾಳೆ ಮತ್ತು ಹೆಚ್.ಡಿ.ಪಿ.ಇ. ನೇಯ್ದ ಚೀಲಗಳನ್ನು ಸರಬರಾಜು ಮಾಡಲು ಭರವಸೆ ಹೊಂದಿದ ಉತ್ಪಾದಕರ ಸಂಭಾವ್ಯ ಪಟ್ಟಿಯನ್ನು ತಯಾರಿಸಲು ಸರ್ಕಾರದಿಂದ ಪರವಾನಗಿ ಪಡೆದ ಆಸಕ್ತ ಉದ್ದಿಮೆ / ಉತ್ಪಾದಕರಿಂದ ಅರ್ಜಿಗಳನ್ನು ಈ ಕಚೇರಿಯ ಅಧಿಸೂಚನೆ ದಿನಾಂಕ 12–08–2010 ರಲ್ಲಿ ಆಹ್ವಾನಿಸಲಾಗಿದೆ. ಈ ಕೆಳಕಂಡಂತೆ ಸಂಕ್ಷಿಪ್ತ ಟೆಂಡರ್ ದರ / ಪ್ರಕಟಣೆಯನ್ನು ಪ್ರಕಟಣೆಯ ಮೂಲಕ ಸೆಳೆಯಲಾಗಿದೆ ಹೆಚ್ಚಿನ ವಿವರಗಳನ್ನು http://eproc.karnataka.gov.in ಹಾಗೂ ಇಲಾಖೆಯ ವೆಬ್‌ಸೈಟ್ www.karnatakaforest.gov.in ವೆಬ್‌ಸೈಟಿನಿಂದ ಡೌನ್‌ಲೋಡ್ ಮಾಡಿಕೊಳ್ಳಬಹುದು. ಪಾಲಿಥೀನ್ ಚೀಲ / ಹಾಳೆ / ನೇಯ್ದ ಚೀಲಗಳಿಗೆ ಒಂದು ಸಾವಿರ ಚೀಲಗಳಿಗೆ ಅನ್ವಯಿಸುವ ದರವನ್ನು ನಮೂದಿಸಿ ಆಸಕ್ತಿಯಿರುವ ಸರಬರಾಜುದಾರರು ತಮ್ಮ ಅರ್ಜಿಯನ್ನು ದಿನಾಂಕ: 26–08–2010 ರೊಳಗೆ ಇ–ಪ್ರೊಕ್ಯುರ್‌ಮೆಂಟ್ ಪೋರ್ಟಲ್‌ನಲ್ಲಿ ತಿಳಿಸಿರುವ ನಿರ್ದೇಶನದ ಪ್ರಕಾರ ಸಲ್ಲಿಸತಕ್ಕದ್ದು.

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, (ಮುಖ್ಯಸ್ಥರು, ಅರಣ್ಯ ಪಡೆ)

**Karnataka Forest Department**

**Principal Chief Conservator of Forests,**

**Aranya Bhavan, 18th Cross, Malleshwarm, Bangalore-560003**

**NOTIFICATION NO.PCCF.C.CR-1-PA.CHI/2010-11, DATED: 12th August 2010.**

Prequalification Tenders to shortlist Manufacturers Industries for supply of Polythene Bags/Sheets, Woven Sacks

The Karnataka Forest Department intends to short list promising prospective manufacturing Industries to Supply Polythene Bags, Polythene Sheets, Woven Sacks in the manner specified for the

Forest Nursery season 2010-11 between the period -1.09.2010 to 31.08.2011, and hence applications are called for from the desirous in the notification dated: 12-08-2010. The attention of the Industries manufacturing LDPE Polythene bags, Polythene Sheet and HDPE Woven sacks is invited to this brief notification. The details can be obtained from the website of e-Governance http://eproc.karnataka.gov.in and also from the department website **www.karnatakaforest.gov.in**. The rate per Ton of Polythene bags/Sheets and rate per 1000 nos. of Woven sacks will be determined from among the prospective manufacturers for further receiving Rate Tenders from such of the short listed participants subsequently. Such of the intending suppliers may express their interest in the prescribed pro-forma and submit as per directions available in e-procurement portal on or before 26-08-2010.

P.R. 632 Principal Chief Conservator of Forests

**ಕರ್ನಾಟಕ ಅರಣ್ಯ ಇಲಾಖೆ**

**ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಭವನ, 18ನೇ ಅಡ್ಡರಸ್ತೆ,**

**ಮಲ್ಲೇಶ್ವರಂ, ಬೆಂಗಳೂರು–560 003**

**ಇ–ಟೆಂಡರ್ ಅಧಿಸೂಚನೆ**

**ಅಧಿಸೂಚನೆ ಸಂಖ್ಯೆ:ಪಿಸಿಸಿಎಫ್:ಸಿ:ಸಿಆರ್– 3/ಮು.ತಂತಿ/:2010–11, ದಿನಾಂಕ: 12ನೇ ಆಗಸ್ಟ್ 2010.**

**ವಿಷಯ :** ಮುಳ್ಳುತಂತಿ, ಚೈನ್‌ಲಿಂಕ್ ಮೆಶ್ ಹಾಗೂ ಸಾದಾ ತಂತಿ ಪೂರೈಕೆಗಾಗಿ ಅರ್ಹತಾಪೂರ್ವ "ಇ" ಟೆಂಡರ್ ದರದ ಪ್ರಕಟಣೆ ಬಗ್ಗೆ.

ಕರ್ನಾಟಕ ಅರಣ್ಯ ಇಲಾಖೆಯಲ್ಲಿ 2010–11 ನೇ ಸಾಲಿನಲ್ಲಿ ಅರಣ್ಯ ಸಸ್ಯಕ್ಷೇತ್ರದಲ್ಲಿ 01–09–2010 ರಿಂದ 31–08–2011ರವರೆಗಿನ ಅವಧಿಯಲ್ಲಿ ಮುಳ್ಳುತಂತಿ, ಚೈನ್‌ಲಿಂಕ್ ಮೆಶ್ ಹಾಗೂ ಸಾದಾ ತಂತಿಯನ್ನು ಸರಬರಾಜು ಮಾಡಲು ಭರವಸೆ ಹೊಂದಿದ ಉತ್ಪಾದಕರ ಸಂಭಾವ್ಯ ಪಟ್ಟಿಯನ್ನು ತಯಾರಿಸಲು ಸರ್ಕಾರದಿಂದ ಪರವಾನಗಿ ಪಡೆದ ಆಸಕ್ತ ಉದ್ದಿಮೆ / ಉತ್ಪಾದಕರಿಂದ ಅರ್ಜಿಗಳನ್ನು ಈ ಕಚೇರಿಯ ಅಧಿಸೂಚನೆ ದಿನಾಂಕ 12–08–2010 ರಲ್ಲಿ ಆಹ್ವಾನಿಸಲಾಗಿದೆ. ಈ ಕೆಳಕಂಡಂತೆ ಸಂಕ್ಷಿಪ್ತ ಟೆಂಡರ್ ದರ / ಪ್ರಕಟಣೆಯನ್ನು ಪ್ರಕಟಣೆಯ ಮೂಲಕ ಸೆಳೆಯಲಾಗಿದೆ ಹೆಚ್ಚಿನ ವಿವರಗಳನ್ನು http://eproc.karnataka.gov.in ಹಾಗೂ ಇಲಾಖೆಯ ವೆಬ್‌ಸೈಟ್ www.karnatakaforest.gov.in ವೆಬ್‌ಸೈಟಿನಿಂದ ಡೌನ್‌ಲೋಡ್ ಮಾಡಿಕೊಳ್ಳಬಹುದು. ಮುಳ್ಳುತಂತಿಗೆ ಮತ್ತು ಸಾದಾ ತಂತಿಗೆ ಪ್ರತಿ ಟನ್ನಿಗೆ ಮತ್ತು ಚೈನ್ ಲಿಂಕ್ ಮೆಶ್‌ಗೆ ಒಂದು ಚದರ ಅಡಿಗೆ ಅನ್ವಯಿಸುವ ದರವನ್ನು ನಮೂದಿಸಿ ಆಸಕ್ತಿಯಿರುವ ಸರಬರಾಜುದಾರರು ತಮ್ಮ ಅರ್ಜಿಯನ್ನು ದಿನಾಂಕ: 26–08–2010 ರೊಳಗೆ ಇ–ಪ್ರೊಕ್ಯುರ್‌ಮೆಂಟ್ ಪೋರ್ಟಲ್‌ನಲ್ಲಿ ತಿಳಿಸಿರುವ ನಿರ್ದೇಶನದ ಪ್ರಕಾರ ಸಲ್ಲಿಸತಕ್ಕದ್ದು.

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, (ಮುಖ್ಯಸ್ಥರು, ಅರಣ್ಯ ಪಡೆ)

**Karnataka Forest Department**

**Principal Chief Conservator of Forests,**

**Aranya Bhavan, 18th Cross, Malleshwarm, Bangalore-560003**

**NOTIFICATION NO.PCCF.C.CR-03 -MulluThanthi.2010-11, DATED: 12th August 2010.**

**Prequalification Tenders to shortlist Manufacturers for supply of Barbed wire, Chain Link Mesh & Plain Wire.**

The Karnataka Forest Department intends to short list promising prospective manufacturing Industries to Supply Barbed wire, Chain Link Mesh & Plain Wire Manufacturers, that the Karnataka Forest Department between the period -1.09.2010 to 31.08.2011, and hence applications are called for from the desirous in the notification dated: 12-08-2010. The attention of the Industries manufacturing Barbed wire, Chain Link Mesh & Plain Wire is invited to this brief notification. The details can be obtained from the website of e-Governance http://eproc.karnataka.gov.in and also from the department website **www.karnatakaforest.gov.in**. The Rate Per MT of Barbed Wire & Plain Wire and Rate pet Sq. Ft. of Chain Link Mesh will be determined from among the prospective manufacturers for further receiving Rate Tenders from such of the short listed participants subsequently. Such of the intending suppliers may express their interest in the prescribed pro-forma and submit as per directions mentioned in e-procurement portal on or before 26-08-2010.

P.R. 633 Principal Chief Conservator of Forests

**ಕರ್ನಾಟಕ ಲೋಕಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು–560001.**

**ಅಧಿಸೂಚನೆ**

**ಸಂಖ್ಯೆ, ಇಪ(1)1932/2010–11/ಪಿಎಸ್‌ಸಿ, ಬೆಂಗಳೂರು, ದಿನಾಂಕ: 12ನೇ ಆಗಸ್ಟ್ 2010.**

**ವಿಷಯ: 2010**ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಆನ್‌ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸುವ ಬಗ್ಗೆ.

ಆಯೋಗದಿಂದ ನಡೆಸಲಾಗುವ **2010ನೇ** ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳಿಗೆ ಕರ್ನಾಟಕ ನಾಗರಿಕ ಸೇವಾ ನಿಯಮಗಳಡಿಯಲ್ಲಿ ಸೇವೆ ಸಲ್ಲಿಸುತ್ತಿರುವ ಅರ್ಹ ಅಭ್ಯರ್ಥಿಗಳಿಂದ ಆನ್‌ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಿದೆ. ಈ ಬಗ್ಗೆ ಸೂಚನೆಗಳನ್ನು ಆಯೋಗದ ವೆಬ್‌ಸೈಟ್ **"http://kpsc.kar.nic.in"** ನಲ್ಲಿ ಬಿತ್ತರಿಸಲಾಗಿದೆ. ಈ ಪರೀಕ್ಷೆಗಳನ್ನು ಡಿಸೆಂಬರ್ 2010ರ ಮಾಹೆಯಲ್ಲಿ ನಡೆಸಲಾಗುವುದು. ಪರೀಕ್ಷೆಗಳ ವೇಳಾ ಪಟ್ಟಿಯನ್ನು ಈ ಅಧಿಸೂಚನೆಯ ಅನುಬಂಧ "ಎ" ನಲ್ಲಿ ಎಲ್ಲಾ ಕೇಂದ್ರಗಳಲ್ಲಿ ನಡೆಯುವ ಪರೀಕ್ಷೆಗಳ ಬಗ್ಗೆ ಹಾಗೂ ಅನುಬಂಧ "ಬಿ" ನಲ್ಲಿ ಬೆಂಗಳೂರು ಕೇಂದ್ರದಲ್ಲಿ ಮಾತ್ರ ನಡೆಯುವ ಪರೀಕ್ಷೆಗಳ ಬಗ್ಗೆ ವಿವರವಾಗಿ ನೀಡಲಾಗಿದೆ. ಪರೀಕ್ಷೆಗೆ ಹಾಜರಾಗಬಯಸುವ ಅಭ್ಯರ್ಥಿಗಳು ಒಂದು ಅರ್ಜಿಯಲ್ಲಿ ಗರಿಷ್ಠ ಆರು ವಿಷಯಗಳನ್ನು ಆಯ್ಕೆಮಾಡಿ– ಕೊಳ್ಳಬಹುದು. ಅಭ್ಯರ್ಥಿಗಳು ಅರ್ಜಿಯನ್ನು ಭರ್ತಿಮಾಡುವಾಗ ವಿಷಯ ಮತ್ತು ವಿಷಯ ಸಂಕೇತಗಳನ್ನು ಎಚ್ಚರಿಕೆಯಿಂದ ಭರ್ತಿ ಮಾಡಲು ಸೂಚಿಸಿದೆ.

1. **ಅರ್ಜಿ ಸಲ್ಲಿಸುವ ವಿಧಾನ/ಶುಲ್ಕ ಪಾವತಿಸುವ ವಿಧಾನ:**

(ಎ) ಅಭ್ಯರ್ಥಿಗಳು ಅನ್‌ಲೈನ್ ಮೂಲಕ ಅರ್ಜಿಗಳನ್ನು ಭರ್ತಿಮಾಡಬೇಕು ಆಯೋಗದ ವೆಬ್‌ಸೈಟ್ **"http://kpsc.kar.nic.in/ HOME PAGE "** ನಲ್ಲಿ **ON LINE** ಮುಖಾಂತರ ಅರ್ಜಿ ಸಲ್ಲಿಸುವ ವಿಧಾನ: ಅಭ್ಯರ್ಥಿಯು ಆಯೋಗದ ಅಧಿಕೃತ ವೆಬ್‌ಸೈಟ್ **"http://kpsc.kar.nic.in"** ತೆರೆದ ಕೂಡಲೇ ಕಂಪ್ಯೂಟರ್ ಪರದೆಯ ಬಲಭಾಗದಲ್ಲಿ **"ON LINE APPLICATION "** ಎಂಬುದು **" BLINK "** ಆಗುತ್ತಲಿದ್ದು, ಅದರ ಮೇಲೆ ಕ್ಲಿಕ್ ಮಾಡಿದ ಕೂಡಲೇ ವಿವಿಧ ಅಧಿಸೂಚನೆಗಳ ವಿವರ ಲಭ್ಯವಾಗುತ್ತದೆ. ಅದರಲ್ಲಿ ಅಭ್ಯರ್ಥಿಗಳಿಗೆ ಅನ್ವಯವಾಗುವ ಅಧಿಸೂಚನೆಯನ್ನು ಆಯ್ಕೆ ಮಾಡಿಕೊಳ್ಳತಕ್ಕದ್ದು, ಅದರಲ್ಲಿ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ಮುನ್ನ ಅನುಸರಿಸಬೇಕಾದ ಸೂಚನೆಗಳನ್ನು ನೀಡಲಾಗಿದ್ದು ಅವುಗಳನ್ನು ಪೂರ್ಣವಾಗಿ ತಿಳಿದುಕೊಂಡು ನಂತರ **"Apply "** ಎಂಬುದರ ಮೇಲೆ ಕ್ಲಿಕ್ ಮಾಡಿ ನಿಗದಿಪಡಿಸಿದ ಎಲ್ಲಾ ವಿವರಗಳನ್ನು ಸ್ಪಷ್ಟವಾಗಿ ನಮೂದಿಸಿ ಅರ್ಜಿ **Submit** ಮಾಡಬೇಕು.

(ಬಿ) ಅಭ್ಯರ್ಥಿಯು ಇತ್ತೀಚೆಗಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಶುದ್ಧವಾದ ಬಿಳಿ ಹಾಳೆಯ ಮೇಲೆ ಅಂಟಿಸಿ ಅದರ ಕೆಳಗೆ ಬಾಕ್ಸ್‌ನಲ್ಲಿ ಕಪ್ಪು ಶಾಹಿಯ ಸ್ಕೆಚ್‌ಪೆನ್/ಮಾರ್ಕರ್ ಪೆನ್‌ನಲ್ಲಿ ಸಹಿಯನ್ನು ಮಾಡಿ ಇದನ್ನು ಸ್ಕ್ಯಾನ್ ಮಾಡಿ ಅರ್ಜಿಗೆ **Upload** ಮಾಡಬೇಕು. ಸಹಿ ಮಾಡದ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಭರ್ತಿ ಮಾಡಿದ ಆನ್‌ಲೈನ್ ಅರ್ಜಿಯ ಪ್ರತಿಯು ಎರಡು ಭಾಗಗಳಲ್ಲಿ ಇರುತ್ತದೆ. (ಭಾಗ–1 ಮತ್ತು ಭಾಗ–2) ಅವೆರಡನ್ನು **Down load** ಮಾಡಿಕೊಂಡು ಭಾಗ–1ನ್ನು ಅಭ್ಯರ್ಥಿಗಳು ತಮ್ಮಲ್ಲಿ ಇರಿಸಿಕೊಳ್ಳತಕ್ಕದ್ದು ಹಾಗೂ ಆಯೋಗವು ಕೇಳಿದಾಗ ಅದನ್ನು ಹಾಜರುಪಡಿಸತಕ್ಕದ್ದು.

(ಸಿ) ಮೇಲಧಿಕಾರಿಯ ಪ್ರಮಾಣಪತ್ರದ ಅರ್ಜಿಯ ಭಾಗ–2ರ ಪ್ರತಿಯನ್ನು **Down load** ಮಾಡಿಕೊಂಡು ನಿಗದಿಪಡಿಸಿದ ಅಂಕಣದಲ್ಲಿ ಶುಲ್ಕ ಪಾವತಿಸಿದ ವಿವರಗಳನ್ನು ಭರ್ತಿಮಾಡಿ ಮೇಲಧಿಕಾರಿಯವರಿಂದ ದೃಢೀಕರಿಸತಕ್ಕದ್ದು. ಮತ್ತು ನಿಗದಿತ ಶುಲ್ಕವನ್ನು "ಕಾರ್ಯದರ್ಶಿ ಹಾಗೂ ನಿಯಂತ್ರಕರು, ಇಲಾಖಾ ಪರೀಕ್ಷೆಗಳು, ಕರ್ನಾಟಕ ಲೋಕಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು–560001" ಇವರ ಹೆಸರಿಗೆ ಡಿ.ಡಿ/ಐ.ಪಿ.ಓ.ಗಳನ್ನು ಪಡೆದು ಅವುಗಳ ಹಿಂಬದಿಯಲ್ಲಿ ಅಭ್ಯರ್ಥಿಯ ಹೆಸರು, ಮತ್ತು ಆನ್‌ಲೈನ್ ಅರ್ಜಿ ಸಂಖ್ಯೆಯನ್ನು ಕಡ್ಡಾಯವಾಗಿ ನಮೂದಿಸತಕ್ಕದ್ದು. ಮೇಲಧಿಕಾರಿಗಳಿಂದ ದೃಢೀಕರಿಸಿದ ಪ್ರಮಾಣಪತ್ರ ಮತ್ತು ನಿಗದಿತ ಶುಲ್ಕದೊಡನೆ (ಡಿ.ಡಿ./ಐ.ಪಿ.ಓ. ಮೂಲಕ) ದಿನಾಂಕ: 20–9–2010ರ ಒಳಗೆ ತಮ್ಮ ಮೇಲಧಿಕಾರಿಗಳ ಮೂಲಕ "ಕಾರ್ಯದರ್ಶಿ ಹಾಗೂ ನಿಯಂತ್ರಕರು, ಇಲಾಖಾ ಪರೀಕ್ಷೆಗಳು, ಕರ್ನಾಟಕ ಲೋಕಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು–560001"ಇವರಿಗೆ ರವಾನಿಸುವುದು. ನಿಗದಿತ ದಿನಾಂಕದ ನಂತರ ಬರುವ ಹಾಗೂ ಮೇಲಧಿಕಾರಿಗಳ ಪ್ರಮಾಣಪತ್ರವಿಲ್ಲದ ಮತ್ತು ಡಿ.ಡಿ./ಐ.ಪಿ.ಓ. ಲಗತ್ತಿಸಿಲ್ಲದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

2. **ಅರ್ಜಿಗಳನ್ನು ಸಲ್ಲಿಸುವ ದಿನಾಂಕ:**

ಅರ್ಜಿಗಳನ್ನು **18–08–2010** ರಿಂದ **20–09–2010**ರ ಒಳಗಾಗಿ ಸಲ್ಲಿಸತಕ್ಕದ್ದು. ಈ ದಿನಾಂಕದ ನಂತರ **ON LINE** ಮೂಲಕ ಅರ್ಜಿ ಸಲ್ಲಿಸಲು ಅವಕಾಶವಿರುವುದಿಲ್ಲ. ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ ರಜೆ ದಿನವಾಗಿದ್ದಲ್ಲಿ ಮುಂದಿನ ಕಛೇರಿ ದಿನವನ್ನು ಕೊನೆಯ ದಿನಾಂಕ ಎಂದು ಪರಿಗಣಿಸಲಾಗುವುದು.

**ಸೂಚನೆಗಳು:**

(1) ಅನುದಾನಿತ/ಖಾಸಗಿ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ನೌಕರರು ಇಲಾಖಾ ಪರೀಕ್ಷೆಗಳಿಗೆ ಅರ್ಜಿ ಸಲ್ಲಿಸಲು ಅವಕಾಶವಿರುವುದಿಲ್ಲ.

(2) ಇಲಾಖಾ ಪರೀಕ್ಷೆಗಳಿಗೆ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಮೊದಲ ಪ್ರಯತ್ನದಿಂದಲೇ ಕಡ್ಡಾಯವಾಗಿ ನಿಗದಿಪಡಿಸಿರುವ ಪರೀಕ್ಷಾ ಶುಲ್ಕವನ್ನು ಪಾವತಿಸತಕ್ಕದ್ದು. ತಪ್ಪಿದಲ್ಲಿ ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

(3) ಶುಲ್ಕ ಪಾವತಿಸದ ಹಾಗೂ ಅಪೂರ್ಣ ಅರ್ಜಿಗಳನ್ನು ಮತ್ತು ಕೊನೆಯ ದಿನಾಂಕದ ನಂತರ ಸಲ್ಲಿಸಿದ ಅರ್ಜಿಗಳನ್ನು ಯಾವ ಸೂಚನೆಯನ್ನು ನೀಡದೇ ತಿರಸ್ಕರಿಸಲಾಗುವುದು.

**ವಿಶೇಷ ಸೂಚನೆ:** (1) ON LINE ಮೂಲಕ ಅರ್ಜಿಯನ್ನು ಭರ್ತಿಮಾಡುವ ಸಂದರ್ಭದಲ್ಲಿ ಯಾವುದಾದರೂ ತಾಂತ್ರಿಕ ತೊಂದರೆ ಅಥವಾ ಸಮಸ್ಯೆ ಎದುರಾದಲ್ಲಿ ಸಹಾಯವಾಣಿ (Help line) No. 9740977411 ಮತ್ತು **080-30574944/30574945** ಗಳನ್ನು ಸಂಪರ್ಕಿಸಿ ಅಗತ್ಯ ಮಾಹಿತಿ ಪಡೆದು ಅರ್ಜಿ ಸಲ್ಲಿಸಬಹುದು.

(2) ON LINE ಮೂಲಕ ಸಲ್ಲಿಸಿದ ಅರ್ಜಿಯ ಸ್ಥಿತಿಯನ್ನು ತಿಳಿಯಲು ಅಭ್ಯರ್ಥಿಗಳು ಅರ್ಜಿಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಿಂದ 15 ದಿನಗಳ ನಂತರ "welcome to on-line applicaton" ಪರದೆಯ ಮೇಲೆ ಮೂಡಿದ ನಂತರ ಅದರಲ್ಲಿ " Check Status " ಎಂಬುದರ ಮೇಲೆ " click" ಮಾಡಿದರೆ, ಅರ್ಜಿಯು ಸ್ವೀಕೃತವಾಗಿರುವ ಬಗ್ಗೆ ಮಾಹಿತಿ ದೊರೆಯುವುದು, ಅಭ್ಯರ್ಥಿಗಳು ಇದನ್ನು ಖಚಿತ ಪಡಿಸಿಕೊಳ್ಳತಕದ್ದು.

**3. ವಿಷಯ, ಸಂಕೇತಗಳು ಮತ್ತು ನಿಗದಿಪಡಿಸಿದ ಶುಲ್ಕ:** (ಎ) ಇಲಾಖಾ ಪರೀಕ್ಷೆಯ ವಿವಿಧ ವಿಷಯಗಳು, ಅವುಗಳ ಸಂಕೇತಗಳು ಹಾಗೂ ಸರ್ಕಾರವು ಆದೇಶ ಸಂಖ್ಯೆ. ಸಿಆಸುಇ 6 ಸೇಲೋಸೇ 2010, ದಿನಾಂಕ: 06–08–2010ರನ್ವಯ ಪರಿಷ್ಕತ ಶುಲ್ಕಗಳನ್ನು ಈ ಕೆಳಕಂಡಂತೆ ನಿಗದಿಪಡಿಸಲಾಗಿದೆ.

| ವಿ ಷ ಯ | ವಿಷಯ ಸಂಕೇತ | ನಿಗದಿಪಡಿಸಲಾದ ಶುಲ್ಕ ರೂ. |
|---|---|---|
| ಅಕೌಂಟ್ಸ್ ಲೋಯರ್ | 1. | 50–00 |
| ಕಮ್ಯುನಿಟಿ ಡೆವಲಪ್‌ಮೆಂಟ್ ಭಾಗ–1 | 2. | 50–00 |
| ಕಮ್ಯುನಿಟಿ ಡೆವಲಪ್‌ಮೆಂಟ್ ಭಾಗ–2 | 3. | 50–00 |
| ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್ ಪ್ರೊಸೀಜರ್ ಹೈಯರ್ | 4. | 50–00 |
| ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್ ಪ್ರೊಸೀಜರ್ ಲೋಯರ್ | 5. | 50–00 |
| ಫಾರೆಸ್ಟ್ ಪತ್ರಿಕೆ–1 (ಫಾರೆಸ್ಟ್‌ಗಾರ್ಡ್‌ಗಳಿಗೆ ಮಾತ್ರ) | 6. | 50–00 |
| ಫಾರೆಸ್ಟ್ ಪತ್ರಿಕೆ–2 (ಫಾರೆಸ್ಟ್‌ಗಾರ್ಡ್‌ಗಳಿಗೆ ಮಾತ್ರ) | 7. | 50–00 |
| ಜನರಲ್ ಲಾ ಭಾಗ–2 | 8. | 50–00 |
| ಹೋಮ್ ಗಾರ್ಡ್ಸ್ ಮ್ಯಾನ್ಯುಯಲ್ | 9. | 50–00 |
| ಆಕ್ಟ್ ಅಂಡ್ ರೂಲ್ಸ್ ರಿಲೇಟಿಂಗ್ ಟು ವಿಮೆನ್ ಆಂಡ್ ಚೈಲ್ಡ್ ಡೆವಲಪ್‌ಮೆಂಟ್ | 10. | 50–00 |
| ಮೋಟಾರ್ ವೆಹಿಕಲ್ಸ್ | 11. | 50–00 |
| ಮೈನಿಂಗ್ ಭಾಗ–1 | 12. | 50–00 |
| ಮೈನಿಂಗ್ ಭಾಗ–2 | 13. | 50–00 |
| ಪ್ರಿಸನ್ಸ್ | 14. | 50–00 |
| ಪೋರ್ಟ್ಸ್ ಹೈಯರ್ | 15. | 50–00 |
| ಪೋರ್ಟ್ಸ್ ಲೋಯರ್ | 16. | 50–00 |
| ಸೋಷಿಯಲ್ ವೆಲ್‌ಫೇರ್ ಅಂಡ್ ಬ್ಯಾಕ್‌ವರ್ಡ್ ಕ್ಲಾಸಸ್ ಮ್ಯಾನ್ಯುಯಲ್ ಭಾಗ–1 | 17. | 50–00 |
| ಸೋಷಿಯಲ್ ವೆಲ್‌ಫೇರ್ ಅಂಡ್ ಬ್ಯಾಕ್‌ವರ್ಡ್ ಕ್ಲಾಸಸ್ ಮ್ಯಾನ್ಯುಯಲ್ ಭಾಗ–2 | 18. | 50–00 |
| ಯೂಥ್ ಸರ್ವೀಸ್ ಮ್ಯಾನುಯಲ್ | 19. | 50–00 |

| ವಿ ಷ ಯ | ವಿಷಯ ಸಂಕೇತ | ನಿಗದಿಪಡಿಸಲಾದ ಶುಲ್ಕ ರೂ. |
|---|---|---|
| ಎಕ್ಸೈಸ್ | 20. | 50–00 |
| ಪೊಲೀಸ್ ಮ್ಯಾನ್ಯುಯಲ್ | 21. | 50–00 |
| ಅಕೌಂಟ್ಸ್ ಹೈಯರ್ | 22. | 100–00 |
| ಕಮರ್ಷಿಯಲ್ ಟ್ಯಾಕ್ಸಸ್ ಭಾಗ–2 (ಲೋಯರ್) | 23. | 100–00 |
| ಫಾರೆಸ್ಟ್ | 24. | 100–00 |
| ಫ್ಯಾಕ್ಟರೀಸ್ ಅಂಡ್ ಬಾಯ್ಲರ್ಸ್ ಲಾಸ್ | 25. | 100–00 |
| ಲೇಬರ್ | 26. | 100–00 |
| ಲೋಕಲ್ ಲಾಸ್ ಆಂಡ್ ಕಮರ್ಷಿಯಲ್ ಬುಕ್ ಕೀಪಿಂಗ್ | 27. | 100–00 |
| ಪ್ರೆಸ್ ಅಂಡ್ ಅಲೈಡ್ ಆಫೀಸಸ್ ಮ್ಯಾನ್ಯುಯಲ್ ಹೈಯರ್ | 28. | 100–00 |
| ಪ್ರೆಸ್ ಅಂಡ್ ಅಲೈಡ್ ಆಫೀಸಸ್ ಮ್ಯಾನ್ಯುಯಲ್ ಲೋಯರ್ | 29. | 100–00 |
| ಪಿ.ಡಬ್ಲ್ಯೂ.ಡಿ ಹೈಯರ್ ಭಾಗ–1 | 30. | 100–00 |
| ಪಿ.ಡಬ್ಲ್ಯೂ.ಡಿ ಹೈಯರ್ ಭಾಗ–2 | 31. | 100–00 |
| ಪಿ.ಡಬ್ಲ್ಯೂ.ಡಿ ಲೋಯರ್ | 32. | 100–00 |
| ರಿಜಿಸ್ಟ್ರೇಷನ್ | 33. | 100–00 |
| ಸಿರಿಕಲ್ಚರ್ | 34. | 100–00 |
| ಕೋ–ಆಪರೇಷನ್ | 35. | 100–00 |
| ಜನರಲ್ ಲಾ ಭಾಗ–1 | 36. | 100–00 |
| ಮುನಿಸಿಪಲ್ ಆಂಡ್ ಲೋಕಲ್ ಬೋರ್ಡ್ಸ್ | 37. | 100–00 |
| ಮಾರ್ಕೆಟಿಂಗ್ | 38. | 100–00 |
| ರೆವಿನ್ಯೂ ಹೈಯರ್ ಭಾಗ–1 | 39. | 100–00 |
| ರೆವಿನ್ಯೂ ಹೈಯರ್ ಭಾಗ–2 | 40. | 100–00 |
| ರೆವಿನ್ಯೂ ಲೋಯರ್ | 41. | 100–00 |
| ಕಮರ್ಷಿಯಲ್ ಟ್ಯಾಕ್ಸಸ್ ಭಾಗ–1 ಹೈಯರ್ | 42. | 100–00 |
| ಕೋ–ಆಪರೇಟಿವ್ ಆಡಿಟ್ | 43. | 100–00 |
| ಇನ್ಸೂರೆನ್ಸ್ ಅಡ್ವಾನ್ಸಡ್ | 44. | 100–00 |
| ಇನ್ಸೂರೆನ್ಸ್ ಹೈಯರ್ | 45. | 100–00 |
| ಇನ್ಸೂರೆನ್ಸ್ ಲೋಯರ್ | 46. | 100–00 |
| ಕನ್ನಡ ಭಾಷಾ ಪರೀಕ್ಷೆ | 47. | 100–00 |
| ಫುಡ್ ಅಂಡ್ ಸಿವಿಲ್ ಸಪ್ಲೈಸ್ ಎಕ್ಸಾಮಿನೇಷನ್ | 48. | 100–00 |
| ಕರ್ನಾಟಕ ಕನ್ಸ್ಯೂಮರ್ ಪ್ರೊಟೆಕ್ಷನ್ಸ್ ಸ್ಟೇಟ್ ಕಮಿಷನ್ ಅಂಡ್ ಡಿಸ್ಟ್ರಿಕ್ ಫೋರಮ್ ಸರ್ವಿಸ್ ಎಕ್ಸಾಮಿನೇಶನ್ | 49. | 100–00 |
| ಇಂಡಿಯನ್ ಕಾಂಟ್ರಕ್ಟ್ ಆಕ್ಟ್ | 51. | 50–00 |
| ಕೆ.ಪಿ.ಎಸ್.ಸಿ. ಮ್ಯಾನ್ಯುಯಲ್ | 52. | 50–00 |
| ಕೆ.ಪಿ.ಎಸ್.ಸಿ. ರಿಕ್ರೂಟ್‌ಮೆಂಟ್ ರೂಲ್ಸ್ | 53. | 50–00 |
| ಸೆಕ್ರೆಟೇರಿಯೆಟ್ ಮ್ಯಾನ್ಯುಯಲ್ ಭಾಗ–1 | 54. | 100–00 |
| ಸೆಕ್ರೆಟೇರಿಯೆಟ್ ಮ್ಯಾನ್ಯುಯಲ್ ಭಾಗ–2 | 55. | 50–00 |

| ವಿ ಷ ಯ | ವಿಷಯ ಸಂಕೇತ | ನಿಗದಿಪಡಿಸಲಾದ ಶುಲ್ಕ ರೂ. |
|---|---|---|
| ಸ್ಪೆಷಲ್ ಲಾಸ್ ಅಂಡ್ ಸರ್ವೀಸ್ ರೂಲ್ಸ್ | 56. | 50–00 |
| ಟ್ರಾನ್ಸಲೇಷನ್ ಟೆಸ್ಟ್ | 58. | 50–00 |
| ಎಸ್.ಎ.ಎಸ್ ಭಾಗ–1 | 61. | 100–00 |
| ಎಸ್.ಎ.ಎಸ್ ಭಾಗ–2 | 62. | 100–00 |
| ಎಸ್.ಎ.ಎಸ್ ಭಾಗ–3 | 63. | 100–00 |
| ಟ್ರೆಜರಿ ಅಕೌಂಟ್ಸ್ ಭಾಗ–1 | 64. | 100–00 |
| ಟ್ರೆಜರಿ ಅಕೌಂಟ್ಸ್ ಭಾಗ–2 | 65. | 100–00 |
| ಎಲೆಕ್ಟ್ರಿಸಿಟಿ ಲಾಸ್ ಎಕ್ಸಾಮಿನೇಷನ್ | 66. | 100–00 |
| ಎಲೆಕ್ಟ್ರಿಸಿಟಿ (ಆಡಿಟ್ ಅಂಡ್ ಅಕೌಂಟ್ಸ್) ಲಾಸ್ (ಹೈಯರ್) ಎಕ್ಸಾಮಿನೇಷನ್ ಭಾಗ–1 | 67. | 50–00 |
| ಎಲೆಕ್ಟ್ರಿಸಿಟಿ (ಆಡಿಟ್ ಅಂಡ್ ಅಕೌಂಟ್ಸ್) ಲಾಸ್ (ಹೈಯರ್) ಭಾಗ–2 | 68. | 50–00 |
| ಎಲೆಕ್ಟ್ರಿಸಿಟಿ (ಆಡಿಟ್ ಅಂಡ್ ಅಕೌಂಟ್ಸ್) ಲಾಸ್ (ಲೋಯರ್) ಎಕ್ಸಾಮಿನೇಷನ್ | 70. | 50–00 |
| ಕರ್ನಾಟಕ ಅಡ್ಮಿನಿಸ್ಟ್ರೇಟಿವ್ ಟ್ರಿಬ್ಯೂನಲ್ ಎಕ್ಸಾಮಿನೇಷನ್ | 71. | 50–00 |
| ಕನ್ನಡಭಾಷೆ (ಐ.ಎ.ಎಸ್, ಐ.ಪಿ.ಎಸ್ ಮತ್ತು ಐ.ಎಫ್.ಎಸ್ ಅಧಿಕಾರಿಗಳಿಗೆ) | 72. | 100–00 |
| ಕನ್ನಡ ಭಾಷಾ ಮೌಖಿಕ ಪರೀಕ್ಷೆ | 73. | –– |

**4.** ಇಲಾಖಾ ಪರೀಕ್ಷೆಗಳಲ್ಲಿ ಕೆಳಕಂಡ ವಿಷಯಗಳಿಗೆ ವಸ್ತುನಿಷ್ಠ ಬಹುಆಯ್ಕೆ ಮಾದರಿಯ (**OBJECTIVE TYPE MULTIPLE CHOICE** ) ಪ್ರಶ್ನೆಪತ್ರಿಕೆಗಳನ್ನು ನೀಡಲಾಗುವುದು.

1. ಅಕೌಂಟ್ಸ್ ಲೋಯರ್
2. ಕಮ್ಯುನಿಟಿ ಡೆವಲಪ್‌ಮೆಂಟ್ ಭಾಗ–1
3. ಕಮ್ಯುನಿಟಿ ಡೆವಲಪ್‌ಮೆಂಟ್ ಭಾಗ–2
4. ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್ ಪ್ರೊಸೀಜರ್ ಹೈಯರ್
5. ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್ ಪ್ರೊಸೀಜರ್ ಲೋಯರ್
6. ಫಾರೆಸ್ಟ್ ಪತ್ರಿಕೆ–1
7. ಫಾರೆಸ್ಟ್ ಪತ್ರಿಕೆ–2
8. ಜನರಲ್ ಲಾ ಭಾಗ–2
9. ಹೋಮ್ ಗಾರ್ಡ್ಸ್ ಮ್ಯಾನ್ಯುಯಲ್
10. ಆಕ್ಟ್ ಅಂಡ್ ರೂಲ್ಸ್ ರಿಲೇಟಿಂಗ್ ಟು ವಿಮೆನ್ ಅಂಡ್ ಚೈಲ್ಡ್ ಡೆವಲಪ್‌ಮೆಂಟ್
11. ಮೋಟಾರ್ ವೆಹಿಕಲ್ಸ್
12. ಮೈನಿಂಗ್ ಭಾಗ–1
13. ಮೈನಿಂಗ್ ಭಾಗ–2
14. ಪ್ರಿಸನ್ಸ್
15. ಪೋರ್ಟ್ಸ್ ಹೈಯರ್
16. ಪೋರ್ಟ್ಸ್ ಲೋಯರ್
17. ಸೋಷಿಯಲ್ ವೆಲ್‌ಫೇರ್ ಅಂಡ್ ಬ್ಯಾಕ್‌ವರ್ಡ್ ಕ್ಲಾಸಸ್ ಮ್ಯಾನುಯಲ್ ಭಾಗ–1
18. ಸೋಷಿಯಲ್ ವೆಲ್‌ಫೇರ್ ಅಂಡ್ ಬ್ಯಾಕ್‌ವರ್ಡ್ ಕ್ಲಾಸಸ್ ಮ್ಯಾನುಯಲ್ ಭಾಗ–2
19. ಯೂಥ್ ಸರ್ವೀಸ್ ಮ್ಯಾನ್ಯುಯಲ್
20. ಎಕ್ಸೈಸ್
21. ಪೊಲೀಸ್ ಮ್ಯಾನ್ಯುಯಲ್
22. ಅಕೌಂಟ್ಸ್ ಹೈಯರ್

23. ಕಮರ್ಷಿಯಲ್ ಟ್ಯಾಕ್ಸ್ ಭಾಗ–2 (ಲೋಯರ್)
24. ಫಾರೆಸ್ಟ್
25. ಫ್ಯಾಕ್ಟರೀಸ್ ಅಂಡ್ ಬಾಯ್ಲರ್ಸ್ ಲಾಸ್
26. ಲೇಬರ್
27. ಲೋಕಲ್ ಲಾಸ್ ಅಂಡ್ ಕಮರ್ಷಿಯಲ್ ಬುಕ್ ಕೀಪಿಂಗ್
28. ಪ್ರೆಸ್ ಅಂಡ್ ಅಲೈಡ್ ಆಫೀಸಸ್ ಮ್ಯಾನ್ಯುಯಲ್ ಹೈಯರ್, ಪತ್ರಿಕೆ–1
29. ಪ್ರೆಸ್ ಅಂಡ್ ಅಲೈಡ್ ಆಫೀಸಸ್ ಮ್ಯಾನ್ಯುಯಲ್ ಲೋಯರ್
30. ಪಿ.ಡಬ್ಲ್ಯೂ.ಡಿ ಹೈಯರ್ ಭಾಗ–1, ಪತ್ರಿಕೆ–2
31. ಪಿ.ಡಬ್ಲ್ಯೂ.ಡಿ ಹೈಯರ್ ಭಾಗ–2
32. ಪಿ.ಡಬ್ಲ್ಯೂ.ಡಿ ಲೋಯರ್
33. ರಿಜಿಸ್ಟ್ರೇಷನ್
34. ಸಿರಿಕಲ್ಚರ್
35. ಕೋ–ಆಪರೇಷನ್
36. ಜನರಲ್ ಲಾ ಭಾಗ–1
37. ಮುನಿಸಿಪಲ್ ಅಂಡ್ ಲೋಕಲ್ ಬೋರ್ಡ್ಸ್
38. ಮಾರ್ಕೆಟಿಂಗ್
39. ರೆವಿನ್ಯೂ ಹೈಯರ್ ಭಾಗ–1
40. ರೆವಿನ್ಯೂ ಹೈಯರ್ ಭಾಗ–2
41. ರೆವಿನ್ಯೂ ಲೋಯರ್
42. ಕಮರ್ಷಿಯಲ್ ಟ್ಯಾಕ್ಸಸ್ ಭಾಗ–1 ಹೈಯರ್
43. ಕೋ–ಆಪರೇಟಿವ್ ಆಡಿಟ್
44. ಇನ್ಶೂರೆನ್ಸ್ ಅಡ್ವಾನ್ಸಡ್
45. ಇನ್ಶೂರೆನ್ಸ್ ಹೈಯರ್, ಪತ್ರಿಕೆ–1 ಮತ್ತು 3
46. ಇನ್ಶೂರೆನ್ಸ್ ಲೋಯರ್, ಪತ್ರಿಕೆ–1 ಮತ್ತು 3
47. ಫುಡ್ ಅಂಡ್ ಸಿವಿಲ್ ಸಪ್ಲೈಸ್ ಎಕ್ಸಾಮಿನೇಷನ್
48. ಕರ್ನಾಟಕ ಕನ್ಸ್ಯೂಮರ್ ಪ್ರೋಟೆಕ್ಷನ್ಸ್ ಸ್ಟೇಟ್ ಕಮಿಷನ್ ಅಂಡ್ ಡಿಸ್ಟ್ರಿಕ್ ಫೋರಮ್ ಸರ್ವಿಸ್ ಎಕ್ಸಾಮಿನೇಷನ್
49. ಇಂಡಿಯನ್ ಕಾಂಟ್ರಕ್ಟ್ ಆಕ್ಟ್
50. ಕೆ.ಪಿ.ಎಸ್.ಸಿ. ಮ್ಯಾನ್ಯುಯಲ್
51. ಕೆ.ಪಿ.ಎಸ್.ಸಿ. ರಿಕ್ರೂಟ್‌ಮೆಂಟ್ ರೂಲ್ಸ್
52. ಸೆಕ್ರೆಟೇರಿಯೆಟ್ ಮ್ಯಾನ್ಯುಯಲ್ ಭಾಗ–1
53. ಸ್ಪೆಷಲ್ ಲಾಸ್ ಅಂಡ್ ಸರ್ವೀಸ್ ರೂಲ್ಸ್
54. ಎಸ್.ಎ.ಎಸ್ ಭಾಗ–1, ಪತ್ರಿಕೆ–2 ಮತ್ತು 3
55. ಎಸ್.ಎ.ಎಸ್ ಭಾಗ–2,
56. ಎಸ್.ಎ.ಎಸ್ ಭಾಗ–3
57. ಟ್ರೆಜರಿ ಅಕೌಂಟ್ಸ್ ಭಾಗ–1, ಪತ್ರಿಕೆ–2 ಮತ್ತು 3
58. ಟ್ರೆಜರಿ ಅಕೌಂಟ್ಸ್ ಭಾಗ–2
59. ಎಲೆಕ್ಟ್ರಿಸಿಟಿ ಲಾಸ್
60. ಎಲೆಕ್ಟ್ರಿಸಿಟಿ (ಆಡಿಟ್ ಅಂಡ್ ಅಕೌಂಟ್ಸ್)ಲಾಸ್ (ಹೈಯರ್)ಎಕ್ಸಾಮಿನೇಷನ್ ಭಾಗ–1
61. ಎಲೆಕ್ಟ್ರಿಸಿಟಿ (ಆಡಿಟ್ ಅಂಡ್ ಅಕೌಂಟ್ಸ್) ಲಾಸ್ (ಲೋಯರ್)ಎಕ್ಸಾಮಿನೇಷನ್
62. ಕರ್ನಾಟಕ ಅಡ್ಮಿನಿಸ್ಟ್ರೇಟಿವ್ ಟ್ರಿಬ್ಯೂನಲ್ ಎಕ್ಸಾಮಿನೇಷನ್.

ಪ್ರತಿ ವಿಷಯಗಳಲ್ಲಿನ ಪಠ್ಯಕ್ರಮದಲ್ಲಿರುವ (**Syllabus**) ಯಾವುದಾದರೂ ನಿಯಮಗಳು/ ಅಧಿನಿಯಮಗಳು ನಿರಸನಗೊಂಡಿದ್ದಲ್ಲಿ (**Repealed**) ಅವುಗಳನ್ನು ಕೈಬಿಟ್ಟು ಹೊಸದಾಗಿ ಸೇರ್ಪಡೆಯಾಗಿರುವ ಹಾಗೂ ಪ್ರಸಕ್ತ ಇಲಾಖೆಗಳಲ್ಲಿ ಚಾಲ್ತಿಯಲ್ಲಿರುವ ನಿಯಮ/ ಅಧಿನಿಯಮ– ಗಳನ್ವಯ ಪ್ರಶ್ನೆಪತ್ರಿಕೆಗಳನ್ನು ಸಿದ್ದಪಡಿಸಿ ಪರೀಕ್ಷೆಗಳನ್ನು ನಡೆಸಲಾಗುವುದೆಂದು ಅಭ್ಯರ್ಥಿಗಳ ಗಮನಕ್ಕೆ ತರಲಾಗಿದೆ.

ಈ ವಿಷಯಗಳಲ್ಲಿನ ಪಶ್ನೆಪತ್ರಿಕೆಗಳಲ್ಲಿ ಪ್ರತಿ ಪ್ರಶ್ನೆಗೂ ನಾಲ್ಕು ಸಂಭವನೀಯ ಉತ್ತರಗಳಿರುತ್ತವೆ. ಪ್ರತಿ ಪ್ರಶ್ನೆಗೆ ನೀಡಲಾದ ನಾಲ್ಕು ಉತ್ತರಗಳ ಪೈಕಿ ಒಂದು ಸರಿ ಉತ್ತರವನ್ನು ಆಯ್ಕೆ ಮಾಡಿ ಉತ್ತರಿಸಬೇಕಿರುತ್ತದೆ. ಪ್ರತಿ ಪ್ರಶ್ನೆಗೂ ಆಯ್ಕೆ ಮಾಡಲಾದ ಉತ್ತರವು ಎಲ್ಲಾ ರೀತಿಯಿಂದಲೂ ಸಮರ್ಪಕವಾಗಿರುತ್ತದೆಯೆಂದು ಅರಿತು, ತೃಪ್ತಿಹೊಂದಿದ ನಂತರವೇ ಅಭ್ಯರ್ಥಿಗಳು ನೀಲಿ ಅಥವಾ ಕಪ್ಪು ಬಣ್ಣದ ಬಾಲ್‌ಪೆನ್ನಿನಿಂದ ಎನ್‌ಕೋಡ್ (ಸಂಕೇತ ಗುರುತು) ಮಾಡಬೇಕು, ತರುವಾಯ ತಪ್ಪು ಉತ್ತರಗಳನ್ನು ಯಾವುದೇ ಸಂದರ್ಭದಲ್ಲಿ ಅಳಿಸಲು ಸಾಧ್ಯವಿರುವುದಿಲ್ಲ.

**ಮೇಲ್ಕಂಡ ವಿಷಯಗಳ ಪರೀಕ್ಷೆಯಲ್ಲಿ ನಿಗದಿಪಡಿಸಲಾದ ವಿಷಯಗಳಿಗೆ ಮಾತ್ರ ನಿಯಮದಂತೆ ಪಠ್ಯಪುಸ್ತಕಗಳನ್ನು ಉಪಯೋಗಿಸಬಹುದು. ವಸ್ತುನಿಷ್ಠ ಬಹುಆಯ್ಕೆ ಮಾದರಿಯ ಪರೀಕ್ಷೆಗೆ ನೀಡಲಾಗುವ ಉತ್ತರಪತ್ರಿಕೆಯ (OMR SHEET) ಮಾದರಿ ಪ್ರತಿಯನ್ನು ಹಾಗೂ ಅಭ್ಯರ್ಥಿಗಳಿಗೆ ನೀಡಲಾದ ಸೂಚನೆಗಳನ್ನು ಆಯೋಗದ ವೆಬ್‌ಸೈಟ್‌ನಲ್ಲಿ ನೋಡಬಹುದು.**

**5. ಈ ಕೆಳಕಂಡ ವಿಷಯಗಳಿಗೆ ಎಂದಿನಂತೆ ವಿವರಣಾತ್ಮಕ ಮಾದರಿಯಲ್ಲಿ (Descriptive Type) ಪರೀಕ್ಷೆ ನಡೆಸಲಾಗುವುದು.**

1. ಎಲೆಕ್ಟ್ರಿಸಿಟಿ (ಆಡಿಟ್ ಅಂಡ್ ಅಕೌಂಟ್ಸ್) ಲಾಸ್ (ಹೈಯರ್)ಎಕ್ಸಾಮಿನೇಷನ್ ಭಾಗ–2,ಪತ್ರಿಕೆ–1
2. ಎಸ್.ಎ. ಎಸ್. ಭಾಗ–1, ಪತ್ರಿಕೆ–1
3. ಟ್ರೆಜರಿ ಅಕೌಂಟ್ಸ್ ಭಾಗ–1, ಪತ್ರಿಕೆ–1
4. ಇನ್ಶೂರೆನ್ಸ್ ಹೈಯರ್, ಪತ್ರಿಕೆ–2
5. ಇನ್ಶೂರೆನ್ಸ್ ಲೋಯರ್, ಪತ್ರಿಕೆ–2
6. ಪಿ.ಡಬ್ಲ್ಯೂ.ಡಿ. ಹೈಯರ್ ಭಾಗ–1, ಪತ್ರಿಕೆ–1
7. ಸೆಕ್ರೆಟೇರಿಯೆಟ್ ಮ್ಯಾನ್ಯುಯಲ್ ಭಾಗ–2
8. ಕನ್ನಡಭಾಷೆ, ಪತ್ರಿಕೆ–1 ಮತ್ತು 2
9. ಕನ್ನಡಭಾಷೆ (ಐ.ಎ.ಎಸ್, ಐ.ಪಿ.ಎಸ್ ಮತ್ತು ಐ.ಎಫ್.ಎಸ್ ಅಧಿಕಾರಿಗಳಿಗೆ)ಪತ್ರಿಕೆ–1 ಮತ್ತು2.
10. ಟ್ರಾನ್ಸಲೇಷನ್ ಟೆಸ್ಟ್
11. ಪ್ರೆಸ್ ಅಂಡ್ ಅಲೈಡ್ ಆಫೀಸಸ್ ಮ್ಯಾನ್ಯುಯಲ್ ಹೈಯರ್, ಪತ್ರಿಕೆ–2

6. **ವಿನಾಯಿತಿ ಪಡೆದ ಬಗ್ಗೆ ನಮೂದಿಸುವುದು:**

ಅಭ್ಯರ್ಥಿಗಳು ಪ್ರಸ್ತುತ ಅರ್ಜಿಸಲ್ಲಿಸಿರುವ ವಿಷಯಗಳಲ್ಲಿ ಹಿಂದಿನ ಎರಡು ವರ್ಷಗಳ ಅವಧಿಯೊಳಗಿನ ಅಧಿವೇಶನಗಳಲ್ಲಿ (ಫಲಿತಾಂಶ ಪ್ರಕಟಗೊಂಡ ದಿನಾಂಕದಿಂದ ಯಾವುದಾದರೂ ಪತ್ರಿಕೆಯಲ್ಲಿ ಶೇ. 60ಕ್ಕಿಂತ ಹೆಚ್ಚು ಅಂಕಗಳಿಸಿ ವಿನಾಯಿತಿ ಹೊಂದಿದ್ದಲ್ಲಿ ಅದರ ವಿವರಗಳನ್ನು ಅಂದರೆ ವಿನಾಯಿತಿ ಪಡೆದ ವಿಷಯ, ವಿಷಯಸಂಕೇತ, ಪತ್ರಿಕೆ, ನೋಂದಣಿ ಸಂಖ್ಯೆ, ಅಧಿವೇಶನ ಮತ್ತು ಪರೀಕ್ಷಾಕೇಂದ್ರ ಇತ್ಯಾದಿಗಳನ್ನು **ಆನ್‌ಲೈನ್ ಅರ್ಜಿಯಲ್ಲಿ ನಿಗದಿಪಡಿಸಿದ ಅಂಕಣದ**ಲ್ಲಿ ನಿರ್ದಿಷ್ಟವಾಗಿ ನಮೂದಿಸಬೇಕು. ಇಲ್ಲವಾದಲ್ಲಿ ಫಲಿತಾಂಶವನ್ನು ಸಿದ್ಧಪಡಿಸುವಾಗ ಹಿಂದೆ ಪಡೆದ ವಿನಾಯಿತಿಯನ್ನು ಪರಿಗಣಿಸಲಾಗುವುದಿಲ್ಲ. ಕನ್ನಡಭಾಷಾ ಪರೀಕ್ಷೆ ಪತ್ರಿಕೆ–1 ಮತ್ತು ಪತ್ರಿಕೆ–2 ರಲ್ಲಿ ವಿನಾಯಿತಿ ಪಡೆದಿದ್ದಲ್ಲಿ ಮೌಖಿಕ ಸಂದರ್ಶನಕ್ಕೆ ಹಾಜರಾಗಲು, ಸದರಿ ಅಧಿವೇಶನಕ್ಕೆ ಅರ್ಜಿ ಸಲ್ಲಿಸಿ ವಿನಾಯಿತಿ ಪಡೆದ ಬಗ್ಗೆ ವಿವರಗಳನ್ನು ಆನ್‌ಲೈನ್ ಅರ್ಜಿಯ ಸಂಬಂಧಿಸಿದ ಅಂಕಣದಲ್ಲಿ ಕಡ್ಡಾಯವಾಗಿ ನಮೂದಿಸಬೇಕು. ಹಾಗೂ ನಿಗದಿತ **ಪರೀಕ್ಷಾ ಶುಲ್ಕ ರೂ. 100/–**ಗಳನ್ನು ಪಾವತಿಸಬೇಕು ಇಲ್ಲದಿದ್ದಲ್ಲಿ ವಿನಾಯಿತಿಯನ್ನು ಪರಿಗಣಿಸುವುದಿಲ್ಲ.

**ಸೂಚನೆಗಳು:**

(ಎ) ಯಾವುದೇ ಸ್ಥಳೀಯ ಪ್ರಾಧಿಕಾರದ ಅಥವಾ ಕಾನೂನು ಮೇರೆಗೆ ರಚಿಸಲಾದ ನಿಗಮಗಳಲ್ಲಿ ಸೇವೆ ಸಲ್ಲಿಸುತ್ತಿರುವ ಅಭ್ಯರ್ಥಿಗಳು ನಿಗದಿತ ಶುಲ್ಕಗಳನ್ನು ಸಂದಾಯ ಮಾಡಿದಲ್ಲಿ ಮಾತ್ರ ಅವರಿಗೆ ಅನ್ವಯವಾಗುವ ಸೇವೆಯ ನೇಮಕಾತಿ ಷರತ್ತುಗಳನ್ನೊಳಗೊಂಡಂತೆ ಅವರು ತೇರ್ಗಡೆಯಾಗಬೇಕಾಗಿರು ವಂತಹ ಸೇವಾ ಪರೀಕ್ಷೆಗಳಿಗೆ ಹಾಜರಾಗಲು ಅರ್ಹರಾಗುತ್ತಾರೆ.

(ಬಿ) ಕೇಂದ್ರ ಪರಿಹಾರ ಸಮಿತಿಯು ಸರ್ಕಾರದ ಸ್ವಾಮ್ಯಕ್ಕೊಳಪಟ್ಟಿರುವ ಸಂಸ್ಥೆಯಾಗಿರುವ ಕಾರಣ ಅಲ್ಲಿಯ ಸಿಬ್ಬಂದಿಗೆ ಇಲಾಖಾ ಪರೀಕ್ಷೆಗಳಾದ ಅಕೌಂಟ್ಸ್ ಹೈಯರ್, ಅಕೌಂಟ್ಸ್ ಲೋಯರ್, ಜನರಲ್ ಲಾ ವಿಷಯಗಳು ಅಲ್ಲದೆ ಅವರುಗಳೂ ನಿಗದಿಪಡಿಸಿರುವ ವಿಷಯಗಳಲ್ಲಿ ತೇರ್ಗಡೆಯಾಗಬೇಕಿರುವಂತಹ ಸೇವಾ ಪರೀಕ್ಷೆಗಳಿಗೆ ಹಾಜರಾಗಲು ಅರ್ಹರಾಗುತ್ತಾರೆ.

(ಸಿ) ಸ್ಥಳೀಯ ಅಭ್ಯರ್ಥಿಗಳು, ಸ್ಟೈಪೆಂಡರಿ ಪದವೀಧರರು, ದೈನಿಕ ಮುಜರಾಯಿ ಮಾಸಿಕ ವೇತನದ ಮೇಲೆ ಕೆಲಸ ಮಾಡುತ್ತಿರುವ ವ್ಯಕ್ತಿಗಳು, ಕರಾರು ಆಧಾರದಲ್ಲಿ ಹಾಗೂ ಅನುದಾನಿತ ಮತ್ತು ಖಾಸಗಿ ಸಂಸ್ಥೆಗಳಲ್ಲಿ ಕೆಲಸ ಮಾಡುತ್ತಿರುವ ವ್ಯಕ್ತಿಗಳು ಈ ಪರೀಕ್ಷೆಗಳಿಗೆ ಅರ್ಜಿ ಸಲ್ಲಿಸಲು ಅರ್ಹರಾಗುವುದಿಲ್ಲ.

(ಡಿ) ಸೇವಾ ಪರೀಕ್ಷೆಗೆ ಅರ್ಜಿ ಸಲ್ಲಿಸುವ ಪ್ರತಿಯೊಬ್ಬ ಅಭ್ಯರ್ಥಿಯ ಆನ್‌ಲೈನ್ ಅರ್ಜಿಯಲ್ಲಿ ಮೇಲಧಿಕಾರಿಯ ಪ್ರಮಾಣಪತ್ರವನ್ನು ದೃಢೀಕರಿಸುವ ಮೊದಲು ಅಭ್ಯರ್ಥಿಯು ಸೇವೆಸಲ್ಲಿಸುತ್ತಿರುವ ಕಛೇರಿ ಮುಖ್ಯಸ್ಥರು ಅಭ್ಯರ್ಥಿಯು ಭರ್ತಿ ಮಾಡಿ **Down load** ಮಾಡಿಟ್ಟುಕೊಂಡ ಆನ್‌ಲೈನ್ ಅರ್ಜಿಯ ಪ್ರತಿಯನ್ನು ಕೂಲಂಕಷವಾಗಿ ಪರಿಶೀಲಿಸಿ ವಾಸ್ತವತೆಯನ್ನು ಖಚಿತಪಡಿಸಿಕೊಂಡು ಸತ್ಯಾಪನೆ ಮಾಡಿ ನಂತರ ದೃಢೀಕರಿಸತಕ್ಕದ್ದು.

(ಇ) ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್ ಪ್ರೊಸೀಜರ್ ಹೈಯರ್ ಮತ್ತು ಲೋಯರ್ ವಿಷಯಗಳ ಪರೀಕ್ಷೆಯಲ್ಲಿ "ಉದ್ಯೋಗ ಮತ್ತು ತರಬೇತಿ ಮಹಾ ನಿರ್ದೇಶನಾಲಯ ನವದೆಹಲಿ ಇವರು ಪ್ರಕಟಿಸಿರುವ **ಎಂಪ್ಲಾಯ್‌ಮೆಂಟ್ ಸರ್ವೀಸ್ ಮ್ಯಾನ್ಯುಯಲ್"** ಪುಸ್ತಕವನ್ನು ಉಪಯೋಗಿಸಲು ಅನುಮತಿ ನೀಡಲಾಗಿದೆ.

ಎಫ್) ಸರ್ಕಾರವು ಅಧಿಸೂಚನೆ ಸಂಖ್ಯೆ: ಡಿಪಿಎಆರ್ 4 ಎಸ್‌ಎಸ್‌ಆರ್ 2007 ದಿನಾಂಕ: 26–04–2008ರಲ್ಲಿ ಕರ್ನಾಟಕ ನಾಗರೀಕ ಸೇವಾ (ಸೇವೆಗಳು ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಗಳು, 1974ರ ಅನುಸೂಚಿ–**I** ಮತ್ತು **II**ರಲ್ಲಿ ನಿಗದಿಪಡಿಸಿರುವ ವಿವಿಧ ವಿಷಯಗಳ ಪಠ್ಯ ಕ್ರಮಕ್ಕೆ ತಿದ್ದುಪಡಿ ಮಾಡಿರುವ ವಿವರಗಳನ್ನು ಈ ಕೆಳಗೆ ನೀಡಿದೆ.

**1. Title and commencement**:- (1) These rules may be called the Karnataka Civil Services (Service and Kannada Language Examinations) (First Amendment) Rules, 2008.

2. They shall come into force from the date of their publication in the Official Gazette.

**2. Amendment of SCHEDULE- I.**- In the Karnataka Civil Services (Service and Kannada Language Examinations) Rules, 1974, (hereinafter referred to as the said rules ) in **SCHEDULE-I,** under the heading " II service examination '', in the " Note'' specifying syllabi for various examinations",-

(1) Under the heading,-" 3. Revenue (Higher) Examination-Part-I" under the sub-heading Paper-II, under " Minor Acts and Rules" items (vii), and (ix) and (x) and entries relating thereto shall be omitted.

(2) Under the heading " 4. Revenue (Lower)" under sub-heading ' Paper-II' , under " Minor Acts and Rules" items (vii), (ix) and (x) and entries relating thereto shall be omitted.

(3) Under the heading "5. General Law Part-I" under sub-heading "Paper-II" ,-

(a) for serial number 3 and entries relating thereto, the following shall be substituted, namely:-

"3. Motor Vehicles Act, 1988 (Central Act 59 of 1988)."

(b) for serial number 6 and entries relating thereto, the following shall be substituted, namely:-

"6. Prevention of corruption Act, 1988 (Central Act 49 of 1988)"

(c) after serial number 8 and entries relating thereto, the following shall be inserted, namely:-

"9. The Right to Information Act, 2005 (Central Act 22 of 2005) and the rules made thereunder."

(4) Under the heading "Community Development Examination Part-II", Note (1) and (2) shall be Omitted.

(5) for the entries under the heading " 19, Marketing Examination" Under the sub-heading " Paper-II', the following shall be substituted namely:-

"The Weights and Measures (Enforcement) Act,1985 and Rules".

(6) Under the heading "22. Motor Vehicles Examination" , for Serial number 1 and the entries relating thereto the following shall be substituted, namely:-

" 1. Motor Vehicles Act, 1988 (Central Act 59 of 1988) and the Rules made thereunder".

(7) Under the heading "23. Karnataka Police Manual Examination" in chapter XLVIII,-

(a) for item (i) and entries relating thereto the following shall be substituted, namely:-

"(i) Karnataka State Police including Ministerial Services (Recruitment) Rules, 2004"

(b) item (iii) and entries relating thereto shall be omitted;

(8) The heading " 24. Stores Purchase Department Manual Examination" and the entries relating thereto shall be omitted.

(9) Under the heading "26. Departmental Examination in Mining" under sub-heading "Part-II," for item (e) and entries relating thereto, the following shall be substituted, namely:-

"(e) Karnataka Minor Mineral Concession Rules, 1994".

(10) Under the heading "36. Public Works Departmental (Higher) Examination Part-I", under the sub-heading " Paper-II" for the words, figures and brackets "Karnataka Irrigation Act, 1959 (Edition) as amended form time to time" the words, figures and brackets " Karnataka Irrigation Act, 1965 (16 of 1965)" shall be substituted.

(11) Uner the heading " 44. Examination in Recruitment Rules" for item (d) an the entries relating thereto the following shall be substituted, namely:-

"(d) The Karnataka Civil Services (Direct Recruitment by Competitive Examinations and Selection) (General) Rules, 2006."

(12) Under the heading "49. Food and Civil Supplies Examinations" under the sub-heading " Paper-II'. for Serial number 2 and the entries relating thereto the following shall be substituted namely:-

"The Weights and Measures (Enforcement) Act, 1985 and Rules".

**3. Amendment of Schedule II.-** In schedule II to the said rules, in the **TABLE,** Serial number 33 and the entries relating thereto shall be omitted.

7. **<u>ಪರೀಕ್ಷಾ ಕೇಂದ್ರಗಳು:</u>** ಪ್ರತಿಯೊಬ್ಬ ಅಭ್ಯರ್ಥಿಯು ಪ್ರಸ್ತುತ ಆತನು ಕೆಲಸ ಮಾಡುತ್ತಿರುವ ಜಿಲ್ಲಾ ಕೇಂದ್ರದಲ್ಲಿಯೇ ಪರೀಕ್ಷೆಗೆ ಕುಳಿತುಕೊಳ್ಳತಕ್ಕದ್ದು. ಆದರೆ, ಯಾವುದೇ ಒಬ್ಬ ಅಭ್ಯರ್ಥಿಯು ಅನಂತರ ಇತರ ಕೇಂದ್ರಕ್ಕೆ ವರ್ಗಾವಣೆಯಾದಲ್ಲಿ ಅಥವಾ ಅವನು ತನ್ನ ಕೇಂದ್ರ ಕಾರ್ಯಸ್ಥಾನದ ಹೊರಗೆ ಗಳಿಕೆ ರಜೆಯ ಮೇಲಿರುವುದು ಮುಂತಾದ ನಿರ್ದಿಷ್ಟ ವಿಶೇಷ

ಕಾರಣಗಳಿದ್ದಲ್ಲಿ ಅಂತಹ ಅಭ್ಯರ್ಥಿಗಳು ಈ ಬಗ್ಗೆ ಲಿಖಿತ ರೂಪದಲ್ಲಿ ಆಯೋಗದ ಗಮನಕ್ಕೆ ತರತಕ್ಕದ್ದು, ಹಾಗೂ ಸಂಬಂಧಿಸಿದ ಮಾಹಿತಿ/ದಾಖಲೆಗಳನ್ನು ಒದಗಿಸತಕ್ಕದ್ದು. ಆಯೋಗವು ಅಂತಹ ಅಭ್ಯರ್ಥಿಗಳಿಗೆ ಬೇರೆ ಕೇಂದ್ರಗಳಲ್ಲಿ ಪರೀಕ್ಷೆಗೆ ಹಾಜರಾಗುವುದಕ್ಕೆ ಕ್ರಮತೆಗೆದುಕೊಳ್ಳಲಾಗುವುದು. ಆಯೋಗದ ನಿರ್ದಿಷ್ಟ ಅನುಮತಿ ಇಲ್ಲದೆ ಅಭ್ಯರ್ಥಿಗಳು ಬೇರೆ ಕೇಂದ್ರದಲ್ಲಿ ಪರೀಕ್ಷೆಗಳನ್ನು ತೆಗೆದುಕೊಳ್ಳುವಂತಿಲ್ಲ. ಆ ರೀತಿ ಮಾಡಿದ ಅಭ್ಯರ್ಥಿಗಳು ಆಯೋಗ ತೆಗೆದುಕೊಳ್ಳುವ ಕ್ರಮಕ್ಕೆ ಹೊಣೆಯಾಗುವರು.

ಎ(1) ಖಜಾನೆ ಅಕೌಂಟ್ಸ್, ಸಬಾರ್ಡಿನೇಟ್ ಅಕೌಂಟ್ಸ್ ಸರ್ವೀಸ್,ಎಲೆಕ್ಟ್ರಿಸಿಟಿ ಮತ್ತು ಅಖಿಲ ಭಾರತಸೇವಾ (ಐಎಎಸ್, ಐಪಿಎಸ್ ಮತ್ತು ಐಎಫ್‌ಎಸ್) ಅಧಿಕಾರಿಗಳಿಗೆ ಕನ್ನಡ ಭಾಷಾ ಪರೀಕ್ಷೆಗಳನ್ನು **ಬೆಂಗಳೂರು ಕೇಂದ್ರದಲ್ಲಿ ಮಾತ್ರ ನಡೆಸಲಾಗುವುದು.**

(2) ಸಬಾರ್ಡಿನೇಟ್ ಅಕೌಂಟ್ಸ್ ಸೇವಾ(ಎಸ್.ಎ.ಎಸ್) ಪರೀಕ್ಷೆಗಳನ್ನು ತೆಗೆದುಕೊಳ್ಳಬೇಕಾಗುವ ನೌಕರರು ಪ್ರಥಮ ದರ್ಜೆ/ದ್ವಿತೀಯ ದರ್ಜೆ ಸಹಾಯಕರಾಗಿದ್ದಲ್ಲಿ ಅವರು ಸೇವೆಗೆ ನೇಮಕಗೊಂಡ ದಿನಾಂಕದಿಂದ ಪ್ರಥಮ ದರ್ಜೆಸಹಾಯಕರಾಗಿ ಮೂರು ವರ್ಷಗಳಿಗಿಂತ ಕಡಿಮೆ ಇರದ ಅಥವಾ ದ್ವಿತೀಯ ದರ್ಜೆ ಸಹಾಯಕರಾಗಿ ಆರು ವರ್ಷಗಳಿಗಿಂತ ಕಡಿಮೆ ಇರದ ಅವಧಿಯ ಸೇವೆ ಸಲ್ಲಿಸಿದ್ದು ಅಕೌಂಟ್ಸ್ ಹೈಯರ್ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಕಡ್ಡಾಯವಾಗಿ ತೇರ್ಗಡೆಯಾಗಿದ್ದಲ್ಲಿ ಮಾತ್ರ ಸದರಿ ಪರೀಕ್ಷೆಗೆ ಕುಳಿತುಕೊಳ್ಳಲು ಅರ್ಹರಾಗಿರುತ್ತಾರೆ. ಅಂತಹ ಅಭ್ಯರ್ಥಿಗಳು ಅವರ ಸೇವಾ ಅವಧಿಯನ್ನು ಮತ್ತು ಅಕೌಂಟ್ಸ್ ಹೈಯರ್ ಅಥವಾ ತತ್ಸಮಾನ ಪರೀಕ್ಷೆಯಲ್ಲಿ) ತೇರ್ಗಡೆಯಾದ ಬಗ್ಗೆ ವಿವರಗಳನ್ನು ಆನ್‌ಲೈನ್ ಅರ್ಜಿಯ ಸಂಬಂಧಿಸಿದ ಅಂಕಣದಲ್ಲಿ ಕಡ್ಡಾಯವಾಗಿ ನಮೂದಿಸತಕ್ಕದ್ದು.

ಬಿ) ಸಚಿವಾಲಯದ ಕೈಪಿಡಿ ಪರೀಕ್ಷೆ, ಭಾಷಾಂತರ ಇಲಾಖೆಯ ಭಾಷಾಂತರ ಪರೀಕ್ಷೆ ಭಾರತದ ಕರಾರು ಅಧಿನಿಯಮ, ವಿಶೇಷ ಕಾನೂನು ಮತ್ತು ಸೇವಾ ಪರೀಕ್ಷೆಗಳು, ಕರ್ನಾಟಕ ಲೋಕಸೇವಾ ಆಯೋಗದ ಕೈಪಿಡಿ, ಕರ್ನಾಟಕ ಲೋಕಸೇವಾ ಆಯೋಗದ ನೇಮಕಾತಿ ನಿಯಮಗಳ ಪರೀಕ್ಷೆಗಳು ಮತ್ತು ಕರ್ನಾಟಕ ಅಡ್ಮಿನಿಸ್ಟ್ರೇಟಿವ್ ಟ್ರಿಬ್ಯೂನಲ್ ಪರೀಕ್ಷೆಗಳನ್ನು ಬೆಂಗಳೂರು ಕೇಂದ್ರದಲ್ಲಿ ಮಾತ್ರ ನಡೆಸಲಾಗುವುದು.

ಸಿ) ಮುದ್ರಣಾಲಯ ಕೈಪಿಡಿಯ ಹೈಯರ್ ಮತ್ತು ಲೋಯರ್ ಪರೀಕ್ಷೆಗಳನ್ನು ಬೆಂಗಳೂರು, ಮೈಸೂರು, ಧಾರವಾಡ, ಮಡಿಕೇರಿ ಮತ್ತು ಗುಲ್ಬರ್ಗಾ ಕೇಂದ್ರಗಳಲ್ಲಿ ಮಾತ್ರ ನಡೆಸಲಾಗುವುದು.

ಡಿ) ಬಂದರುಗಳ ಇಲಾಖೆಯ ಹೈಯರ್ ಮತ್ತು ಲೋಯರ್ ಪರೀಕ್ಷೆಗಳನ್ನು ಮಂಗಳೂರು ಮತ್ತು ಕಾರವಾರ ಕೇಂದ್ರಗಳಲ್ಲಿ ಮಾತ್ರ ನಡೆಸಲಾಗುವುದು.

ಇ) ಉಳಿದಂತೆ ಇತರೆ ಪರೀಕ್ಷೆಗಳು ಈ ಕೆಳಕಂಡ ಜಿಲ್ಲಾ ಕೇಂದ್ರಗಳಲ್ಲಿ ನಡೆಯಲಿದ್ದು, ಜಿಲ್ಲಾ ಸಂಕೇತ ಸಂಖ್ಯೆಗಳನ್ನು ಅವುಗಳ ಎದುರಿಗೆ ನೀಡಿದೆ. ಈ ಸಂಕೇತ ಸಂಖ್ಯೆಗಳನ್ನು ಅರ್ಜಿಯಲ್ಲಿ ಕಡ್ಡಾಯವಾಗಿ ನಮೂದಿಸತಕ್ಕದ್ದು:–

| ಜಿಲ್ಲೆ | ಸಂಕೇತ | ಜಿಲ್ಲೆ | ಸಂಕೇತ |
|---|---|---|---|
| ಬೆಂಗಳೂರು | **01** | ಕಾರವಾರ | **17** |
| ಬೆಳಗಾವಿ | **02** | ಕೋಲಾರ | **18** |
| ಬಳ್ಳಾರಿ | **03** | ಕೊಪ್ಪಳ | **19** |
| ಬೀದರ್ | **04** | ಮಂಡ್ಯ | **20** |
| ಬಿಜಾಪುರ | **05** | ಮಂಗಳೂರು | **21** |
| ಬಾಗಲಕೋಟೆ | **06** | ಮಡಿಕೇರಿ | **22** |
| ಚಾಮರಾಜನಗರ | **07** | ಮೈಸೂರು | **23** |
| ಚಿಕ್ಕಬಳ್ಳಾಪುರ | **08** | ರಾಮನಗರ | **24** |
| ಚಿಕ್ಕಮಗಳೂರು | **09** | ರಾಯಚೂರು | **25** |
| ಚಿತ್ರದುರ್ಗ | **10** | ಶಿವಮೊಗ್ಗ | **26** |
| ಧಾರವಾಡ | **11** | ತುಮಕೂರು | **27** |
| ದಾವಣಗೆರೆ | **12** | ಉಡುಪಿ | **28** |
| ಗುಲ್ಬರ್ಗಾ | **13** | ನವದೆಹಲಿ | **29** |
| ಗದಗ | **14** | ಮುಸ್ಸೂರಿ | **30** |
| ಹಾಸನ | **15** | ಯಾದಗಿರಿ | **31** |
| ಹಾವೇರಿ | **16** | | |

**8. ಪರೀಕ್ಷಾ ಕೇಂದ್ರದ ಬದಲಾವಣೆ:**

ಪರೀಕ್ಷಾ ಕೇಂದ್ರದ ಬದಲಾವಣೆಗೆ ಸಲ್ಲಿಸುವ ಕೋರಿಕೆಗಳನ್ನು ಪರೀಕ್ಷೆ ಪ್ರಾರಂಭವಾಗುವ ಕನಿಷ್ಠ 15 ದಿನಗಳ ಮೊದಲು ಸಲ್ಲಿಸತಕ್ಕದ್ದು. ಆ ದಿನಾಂಕದ ತರುವಾಯ ಸಲ್ಲಿಸಲ್ಪಡುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. ಅಧಿಕೃತ ಕಾರಣಗಳ

ಮೇಲೆ ಕೇಂದ್ರ ಬದಲಾವಣೆಗೆ ಅರ್ಜಿ ಸಲ್ಲಿಸುವ ನೌಕರರು ವರ್ಗಾವಣೆಯ ಅಥವಾ ಸ್ಥಳ ನಿಯುಕ್ತಿಯ ಆದೇಶಗಳ ದೃಢೀಕೃತ ನಕಲನ್ನು ಅಥವಾ ಸಂದರ್ಭಾನುಸಾರ ಗಳಿಕೆರಜೆ ಮಂಜೂರು ಮಾಡಲಾದ ಅಧಿಕೃತ ಜ್ಞಾಪನಪತ್ರದ ದೃಢೀಕೃತ ನಕಲಿನೊಂದಿಗೆ ಆ ಬಗ್ಗೆ ಪಡೆದ ಪ್ರಮಾಣ ಪತ್ರವನ್ನು ಲಗತ್ತಿಸತಕ್ಕದ್ದು. ಸ್ವವಿಳಾಸ ಬರೆದ ಹಾಗೂ ಅವಶ್ಯಕ ಅಂಚೆಚೀಟಿ ಹಚ್ಚಲಾದ ಲಕೋಟೆಯನ್ನು ಪತ್ರ ವ್ಯವಹಾರಕ್ಕಾಗಿ ಲಗತ್ತಿಸತಕ್ಕದ್ದು. (ರಿಜಿಸ್ಟರ್ಡ್ ಅಂಚೆಯಲ್ಲಿ ಕಳುಹಿಸಬೇಕಾದರೆ ಅದಕ್ಕೆ ತಗಲುವ ಸಾಕಷ್ಟು ಅಂಚೆಚೀಟಿ ಹಚ್ಚಿರಬೇಕು).

ಎ) ವಿವರಣಾತ್ಮಕ ಪರೀಕ್ಷೆಗೆ ಸಂಬಂಧಿಸಿದಂತೆ ಅಭ್ಯರ್ಥಿಗಳು ಸೇವಾ ಪರೀಕ್ಷೆಗಳನ್ನು ಆಂಗ್ಲಭಾಷೆಯಲ್ಲಿ ಅಥವಾ ಕನ್ನಡದಲ್ಲಿ ಉತ್ತರಿಸಲು ಅನುಮತಿಸಲಾಗುವುದು.

ಬಿ) ಅಭ್ಯರ್ಥಿಯು ಉತ್ತರಗಳನ್ನು ಬರೆಯಲು ಆಂಗ್ಲ ಅಥವಾ ಕನ್ನಡದ ಯಾವುದೇ ಒಂದು ಮಾಧ್ಯಮವನ್ನು ಮಾತ್ರ ಆಯ್ಕೆ ಮಾಡಿಕೊಳ್ಳತಕ್ಕದ್ದು. ಅರ್ಧ ಆಂಗ್ಲಭಾಷೆಯಲ್ಲಿ ಮತ್ತು ಅರ್ಧ ಕನ್ನಡದಲ್ಲಿ ಉತ್ತರಿಸಿದಲ್ಲಿ ಅಂತಹ ಪತ್ರಿಕೆಗಳನ್ನು ಮೌಲ್ಯಮಾಪನ ಮಾಡಲಾಗುವುದಿಲ್ಲ.

ಸಿ) ಓಎಂಆರ್ ಉತ್ತರ ಹಾಳೆಯಲ್ಲಿ ನಿಗದಿತ ಸ್ಥಳದಲ್ಲಿ ಅಭ್ಯರ್ಥಿ ನೋಂದಣಿ ಸಂಖ್ಯೆ ಮತ್ತು ವರ್ಷನ್ ಕೋಡನ್ನು ಸರಿಯಾಗಿ ನಮೂದಿಸಿ ಗುರುತಿಸಬೇಕು. ಇಲ್ಲವಾದಲ್ಲಿ ಅಂತಹ ಓ.ಎಂ.ಆರ್. ಉತ್ತರಪತ್ರಿಕೆಯನ್ನು ಮೌಲ್ಯಮಾಪನ ಮಾಡಲಾಗುವುದಿಲ್ಲ.

**9.** <u>ವಿನಾಯಿತಿ:</u>

**ಎ)** ಮಾನ್ಯತೆ ಪಡೆದ ಯಾವುದೇ ವಿಶ್ವವಿದ್ಯಾಲಯದ ಎಲ್.ಎಲ್.ಬಿ., ಅಥವಾ ಬಿ.ಎಲ್ ಪದವಿ ಪಡೆದಂತಹ ಕಾನೂನು ಪದವೀಧರರಿಗೆ ಜನರಲ್ ಲಾ ಭಾಗ–1ರ ಪತ್ರಿಕೆ–(1) ಕ್ಕೂ ಮತ್ತು ಜನರಲ್ ಲಾ ಭಾಗ–2 ಕ್ಕೂ ಹಾಗೂ ಬಿ.ಕಾಂ. ಅಥವಾ ಐ.ಕಾಂ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಅಡ್ವಾನ್ಸ್‌ಡ್ ಅಕೌಂಟೆನ್ಸಿ ಅಥವಾ ಫೈನಾನ್ಸಿಷಿಯಲ್ ಅಕೌಂಟೆನ್ಸಿ ವಿಷಯದಲ್ಲಿ ತೇರ್ಗಡೆಯಾದವರಿಗೆ ಕಮರ್ಷಿಯಲ್ ಟ್ಯಾಕ್ಸ್ ಹೈಯರ್ ವಿಷಯದ ಪತ್ರಿಕೆ–3ಕ್ಕೂ, ಕೋ–ಆಪರೇಷನ್ ವಿಷಯದ ಪತ್ರಿಕೆ–2ಕ್ಕೂ ಹಾಗೂ ಅಡ್ವಾನ್ಸ್‌ಡ್ ಅಕೌಂಟೆನ್ಸಿ ಅಥವಾ ಫೈನಾನ್ಸಿಷಿಯಲ್ ಅಕೌಂಟೆನ್ಸಿ ಓದಿ ಬಿ.ಕಾಂ., ಬಿ.ಬಿ.ಎಂ. ಅಥವಾ ತತ್ಸಮಾನ ಪದವಿ ಪರೀಕ್ಷೆಯಲ್ಲಿ ತೇರ್ಗಡೆಯಾದ ಅಭ್ಯರ್ಥಿಗಳಿಗೆ ಕೋ–ಆಪರೇಟಿವ್ ಆಡಿಟ್ ಪರೀಕ್ಷೆಯ 2ನೇ ಪತ್ರಿಕೆಗೆ ವಿನಾಯಿತಿ ಇದೆ. ಹಾಗೆಯೇ ಅಡ್ವಾನ್ಸ್‌ಡ್ ಅಕೌಂಟೆನ್ಸಿ ಅಥವಾ ಫೈನಾನ್ಸಿಷಿಯಲ್ ಅಕೌಂಟೆನ್ಸಿ ವಿಷಯವನ್ನು ಓದಿರುವ ಬಿ.ಕಾಂ. ಪದವೀಧರರಿಗೆ ಎಸ್.ಎ.ಎಸ್. ಭಾಗ–3ರ ಪತ್ರಿಕೆ–1 ಕ್ಕೂ ಹಾಗೂ ಟ್ರೆಜರಿ ಅಕೌಂಟ್ಸ್ ಭಾಗ–2ರ ಪತ್ರಿಕೆ–1ಕ್ಕೂ ವಿನಾಯಿತಿ ಇರುತ್ತದೆ. ವಿನಾಯಿತಿ ಕೋರುವ ಅಭ್ಯರ್ಥಿಗಳು ಈ ತತ್ಸಂಬಂಧ ವಿಷಯಗಳನ್ನು ಅಭ್ಯಸಿಸಿದ್ದ ಬಗ್ಗೆ ಬಿ.ಕಾಂ., ಎಲ್.ಎಲ್.ಬಿ. ಅಥವಾ ತತ್ಸಮಾನ ಪದವಿಯ ದೃಢೀಕೃತ ಅಂಕಪಟ್ಟಿ ಮತ್ತು ಪದವಿ ಪ್ರಮಾಣ ಪತ್ರಗಳನ್ನು ಮೇಲಧಿಕಾರಿಯವರಿಂದ ದೃಢೀಕರಿಸಿದ ಪ್ರಮಾಣಪತ್ರ, ಹಾಗೂ ಡಿ.ಡಿ/ಐ.ಪಿ.ಓ.ಗಳೊಂದಿಗೆ ಲಗತ್ತಿಸಿ ರವಾನಿಸತಕ್ಕದ್ದು. ಮತ್ತು ಆನ್‌ಲೈನ್ ಅರ್ಜಿಯ ಸಂಬಂಧಿಸಿದ ಅಂಕಣದಲ್ಲಿ ಅಭ್ಯರ್ಥಿಯು ಪಡೆದಿರುವ ಪದವಿಯ ಬಗ್ಗೆ ಕಡ್ಡಾಯವಾಗಿ ನಮೂದಿಸತಕ್ಕದ್ದು. ತಪ್ಪಿದಲ್ಲಿ ಅಂತಹ ವಿನಾಯಿತಿಗಳನ್ನು ಪರಿಗಣಿಸಲಾಗುವುದಿಲ್ಲ.

**(ಬಿ)** <u>ಸರ್ಕಾರಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 76, ದಿನಾಂಕ 10ನೇ ಜನವರಿ 1987</u>ರ ಅನುಸಾರವಾಗಿ ಸರ್ಕಾರಿ ಆದೇಶ ಸಂಖ್ಯೆ 649 ಇಎನ್ ಟಿ 57, ದಿನಾಂಕ 23ನೇ/25ನೇ ಫೆಬ್ರವರಿ 1959ರ ಅನುಸಾರವಾಗಿ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯಿಂದ ನಡೆಸಲಾದ ಅರಣ್ಯ ಇಲಾಖಾ ಪರೀಕ್ಷೆಯಲ್ಲಿ ತೇರ್ಗಡೆಯಾದ ಅಭ್ಯರ್ಥಿಗಳಿಗೆ ಅರಣ್ಯ ಪರೀಕ್ಷೆಯ ಪತ್ರಿಕೆ–2 ರಲ್ಲಿ ತೇರ್ಗಡೆಯಾಗು ವುದರಿಂದ ವಿನಾಯಿತಿ ನೀಡಲಾಗಿದೆ.

(ಸಿ) ಯಾವುದೇ ಪರೀಕ್ಷೆಯು ಒಂದಕ್ಕಿಂತ ಹೆಚ್ಚು ಪತ್ರಿಕೆಗಳನ್ನೊಳಗೊಂಡಿದ್ದು ಅಭ್ಯರ್ಥಿಯು ಆ ಪರೀಕ್ಷೆಯಲ್ಲಿ ಅನುತ್ತೀರ್ಣನಾದರೂ ಅದೇ ವಿಷಯದ ಇತರ ಪತ್ರಿಕೆಗಳಲ್ಲಿ ಆ ಪತ್ರಿಕೆಗೆ ನಿರ್ದಿಷ್ಟಪಡಿಸಲಾದ ಗರಿಷ್ಠ ಅಂಕಗಳಲ್ಲಿ ಶೇಕಡಾ 60ಕ್ಕಿಂತ ಕಡಿಮೆ ಇರದಷ್ಟು ಅಂಕಗಳನ್ನು ಪಡೆದಿದ್ದಲ್ಲಿ ಅಂತಹವರನ್ನು ಆ ಪತ್ರಿಕೆಯಲ್ಲಿ ವಿನಾಯಿತಿ ಹೊಂದಿರುವವರೆಂದು ಪರಿಗಣಿಸಲಾಗುವುದು. ಅಂತಹವರು ಪರೀಕ್ಷೆಗಳ ಫಲಿತಾಂಶ ಘೋಷಿಸಿದ ನಿಯಮಾನುಸಾರ ದಿನಾಂಕದಿಂದ ಎರಡು ವರ್ಷಗಳೊಳಗೆ ಆ ಪರೀಕ್ಷೆಯ ಉಳಿದ ಪತ್ರಿಕೆಗಳಲ್ಲಿ ತೇರ್ಗಡೆಯಾಗಲು ಅವಶ್ಯವಿರುವಷ್ಟು ಅಂಕಗಳನ್ನು ಪಡೆದು ತೇರ್ಗಡೆಯಾಗತಕ್ಕದು. ಇಲ್ಲದಿದ್ದಲ್ಲಿ ಅಂತಹ ವಿನಾಯ್ತಿಯು ರದ್ದಾಗುವುದು.

**10.** <u>**ಪ್ರವೇಶ ಪತ್ರ:**</u>

<u>**ಅರ್ಜಿಗಳನ್ನು ಆನ್‌ಲೈನ್ ಮುಖಾಂತರ ಸಲ್ಲಿಸುತ್ತಿರುವುದರಿಂದ ಪ್ರವೇಶಪತ್ರಗಳನ್ನು ಅಂಚೆ ಮೂಲಕ ಕಳುಹಿಸಲಾಗುವುದಿಲ್ಲ.**</u>

ವೇಳಾ ಪಟ್ಟಿಯನ್ನೊಳಗೊಂಡ ಪ್ರವೇಶ ಪತ್ರವನ್ನು ಪರೀಕ್ಷೆಗೆ ಮೊದಲು ಆಯೋಗದ ವೆಬ್‌ಸೈಟ್‌ನಲ್ಲಿ ಅಳವಡಿಸಲಾಗುತ್ತದೆ. ಅಭ್ಯರ್ಥಿಗಳು ಪ್ರವೇಶಪತ್ರಗಳನ್ನು Down load ಮಾಡಿಕೊಂಡು ನಿಗದಿತ ಪರೀಕ್ಷಾ ಕೇಂದ್ರದಲ್ಲಿ ಪರೀಕ್ಷಾ ವೇಳೆಯಲ್ಲಿ ಪ್ರವೇಶಪತ್ರವನ್ನು ಹಾಜರುಪಡಿಸತಕ್ಕದ್ದು. ಸದರಿ ಪ್ರವೇಶ ಪತ್ರಗಳನ್ನು ಅಭ್ಯರ್ಥಿಗಳು ಜೋಪಾನವಾಗಿಟ್ಟಿರಬೇಕು ಮತ್ತು ಅವುಗಳನ್ನು ತಮ್ಮ ಸೇವಾ ದಾಖಲೆಗಳಲ್ಲಿ ನಮೂದು ಮಾಡುವುದಕ್ಕಾಗಿ ಆಯೋಗದಿಂದ ನೀಡಲಾದ ತೇರ್ಗಡೆ ಪ್ರಮಾಣ ಪತ್ರದೊಂದಿಗೆ ಸಕ್ಷಮ ಪ್ರಾಧಿಕಾರಿಯ ಮುಂದೆ ಹಾಜರುಪಡಿಸತಕ್ಕದ್ದು. ಯಾವುದೇ ಸಂದರ್ಭದಲ್ಲಿ ಪರೀಕ್ಷೆಗಳು ಮುಗಿದ ನಂತರ ಪ್ರವೇಶ ಪತ್ರದ ನಕಲನ್ನು ನೀಡಲಾಗುವುದಿಲ್ಲ.

**11.** <u>**ಪಠ್ಯಪುಸ್ತಕಗಳು:**</u>

ಪಠ್ಯಪುಸ್ತಕಗಳನ್ನು ಉಪಯೋಗಿಸಬಹುದಾದ ಪತ್ರಿಕೆಗಳಿಗೆ ಅಭ್ಯರ್ಥಿಗಳು ಸರ್ಕಾರದಿಂದ ಪ್ರಕಾಶಿಸಲ್ಪಟ್ಟ ಪಠ್ಯಪುಸ್ತಕಗಳನ್ನು ಮತ್ತು ಖಾಸಗಿ ಪ್ರಕಾಶಕರಿಂದ ಪ್ರಕಾಶಿಸಲ್ಪಟ್ಟ ಪುಸ್ತಕಗಳನ್ನು ಸರ್ಕಾರಿ ಪ್ರಕಾಶಿತ ಪುಸ್ತಕಗಳ ಮಾದರಿಗೆ ಯಾವುದೇ ರೀತಿಯ ತದ್ವಿರುದ್ಧವಾಗಿಲ್ಲದಿದ್ದರೆ ಮತ್ತು ಕರ್ನಾಟಕ ಉಚ್ಚ ನ್ಯಾಯಾಲಯದ ದಿನಾಂಕ 3ನೇ ಡಿಸೆಂಬರ್ 1991ರ ಆದೇಶಕ್ಕೆ ಅನುಗುಣವಾಗಿದ್ದರೆ ಅಂತಹ ಪಠ್ಯಪುಸ್ತಕಗಳನ್ನು ಮಾತ್ರ ಪರೀಕ್ಷಾ ಕೇಂದ್ರಗಳಲ್ಲಿ ಉಪಯೋಗಿಸಬಹುದಾಗಿರುತ್ತದೆ. ಇತರೆ ಯಾವುದೇ ಖಾಸಗಿ ಪ್ರಕಾಶಕರ ಪಠ್ಯ ಪುಸ್ತಕಗಳನ್ನು ನಿಷೇಧಿಸಲಾಗಿದೆ.

12. **ತೇರ್ಗಡೆಗೆ ಗಳಿಸಬೇಕಾದ ಅಂಕಗಳು:**

ಎ) ಯಾವುದೇ ಸೇವಾ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಲು ಒಂದು ಪತ್ರಿಕೆಯ ಪರೀಕ್ಷೆಗೆ ಕನಿಷ್ಠ ಶೇಕಡ 40 ಅಂಕಗಳನ್ನು ಪಡೆದಿರಬೇಕು. ಒಂದಕ್ಕಿಂತ ಹೆಚ್ಚು ಪತ್ರಿಕೆಗಳಿದ್ದಲ್ಲಿ ಪ್ರತಿ ಪತ್ರಿಕೆಯಲ್ಲಿ ಕನಿಷ್ಠ ಶೇಕಡಾ 35 ಮತ್ತು ಒಟ್ಟು ಎಲ್ಲಾ ಪತ್ರಿಕೆಗಳಿಂದ ಕನಿಷ್ಠ ಶೇಕಡಾ 40 ಅಂಕಗಳನ್ನು ಪಡೆದಿರಬೇಕು. ವಿನಾಯಿತಿ ಕೋರಿದ ಬಿ.ಕಾಂ. ಹಾಗೂ ಕಾನೂನು ಪದವೀಧರರು, ಹಾಗೂ ಲೋಕಸೇವಾ ಆಯೋಗವು ನಡೆಸುವ ವಿಷಯದ ಪತ್ರಿಕೆಗಳಲ್ಲಿ ಕನಿಷ್ಠ ಶೇಕಡ 40 ಅಂಕಗಳನ್ನು ಪಡೆದಿರಬೇಕು.

ಬಿ) ಯಾವುದೇ ಪರೀಕ್ಷೆಯಲ್ಲಿ ನಿಗದಿಪಡಿಸಿದ ಗರಿಷ್ಠ ಅಂಕಗಳಲ್ಲಿ ಶೇಕಡ 60ಕ್ಕಿಂತ ಕಡಿಮೆ ಇರದಷ್ಟು ಅಂಕಗಳನ್ನು ಪಡೆದು ಉತ್ತೀರ್ಣರಾದಂತಹ ಅಭ್ಯರ್ಥಿಗಳನ್ನು ಪ್ರಥಮ ದರ್ಜೆ ಯಲ್ಲಿ ಉತ್ತೀರ್ಣರಾಗಿರುವುದಾಗಿ ಫಲಿತಾಂಶ ಘೋಷಿಸಲಾಗುವುದು.

13. **ಹಾಜರಿ ಪ್ರಮಾಣ ಪತ್ರಗಳು:**

ಪರೀಕ್ಷೆಗೆ ಹಾಜರಾದ ಬಗ್ಗೆ ಹಾಜರಾತಿ ಪ್ರಮಾಣಪತ್ರ ಪಡೆಯಬಯಸುವ ಅಭ್ಯರ್ಥಿಗಳು ಸಂಬಂಧಪಟ್ಟ ಪರೀಕ್ಷಾಕೇಂದ್ರದ ಮೇಲ್ವಿಚಾರಕರಿಂದ ಅದನ್ನು ಪರೀಕ್ಷಾ ದಿನದಂದೇ ಪಡೆಯತಕ್ಕದ್ದು. ಹಾಜರಿ ಪ್ರಮಾಣಪತ್ರವನ್ನು ಆಯೋಗದ ಕಛೇರಿಯಿಂದ ಯಾವುದೇ ಸಂದರ್ಭದಲ್ಲೂ ನೀಡಲಾಗುವುದಿಲ್ಲ.

14. **ಕನ್ನಡಭಾಷಾ ಲಿಖಿತ ಪರೀಕ್ಷೆಗೆ ಮೌಖಿಕ ಪರೀಕ್ಷೆ:**

(1) ಕನ್ನಡ ಭಾಷಾ ವಿಷಯದ ಲಿಖಿತ ಪರೀಕ್ಷೆಯಲ್ಲಿ ತೇರ್ಗಡೆಯಾದ ಅಭ್ಯರ್ಥಿಗಳಿಗೆ ಮೌಖಿಕ ಪರೀಕ್ಷೆಯನ್ನು ಆಯೋಗದ ಕೇಂದ್ರಕಛೇರಿ, ಪಾರ್ಕ್‌ಹೌಸ್, ಬೆಂಗಳೂರು–560001 ಇಲ್ಲಿ ಹಾಗೂ ಆಯೋಗದ ಪ್ರಾಂತೀಯ ಕಛೇರಿಗಳಾದ ಬೆಳಗಾಂ, ಗುಲ್ಬರ್ಗಾ, ಮೈಸೂರು ಹಾಗೂ ಶಿವಮೊಗ್ಗ ಕೇಂದ್ರಗಳಲ್ಲಿ ನಡೆಸಲಾಗುವುದು.

**ಸೂಚನೆ:** (1) ಯಾವುದೇ ಸರ್ಕಾರಿ ನೌಕರನು/ನೌಕರಳು ಕನ್ನಡಭಾಷಾ ಲಿಖಿತ ಪರೀಕ್ಷೆಯಲ್ಲಿ ತೇರ್ಗಡೆಯಾಗದ ಹೊರತು ಕನ್ನಡ ಮೌಖಿಕ ಪರೀಕ್ಷೆಗೆ ಅರ್ಹರಾಗುವುದಿಲ್ಲ.

(2) ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 81 ಎಸ್‌ಎಸ್‌ಆರ್ 81, ದಿನಾಂಕ 6ನೇ ಜೂನ್ 1981ರ ಮೇರೆಗೆ ಗೃಹರಕ್ಷಕ ಸಂಸ್ಥೆಯ ಸೈನಿಕರು ಕನ್ನಡ ಭಾಷಾ, ಮೌಖಿಕ ಪರೀಕ್ಷೆಯಲ್ಲಿ ಮಾತ್ರ ತೇರ್ಗಡೆಯಾಗತಕ್ಕದ್ದು. ವೇತನ ಮುಂಬಡ್ತಿ ಪಡೆಯುವ ಮತ್ತು ಸೇವಾ ಸ್ಥಿರೀಕರಣದ ಉದ್ದೇಶಗಳಿಗೆ ಕನ್ನಡ ಭಾಷಾ ಲಿಖಿತ ಪರೀಕ್ಷೆಯ ಬದಲಾಗಿ ಗರಿಷ್ಠ 50 ಅಂಕಗಳನ್ನು ನಿಗದಿಪಡಿಸಿರುವ ಕನ್ನಡ ಮೌಖಿಕ ಪರೀಕ್ಷೆಯಲ್ಲಿ ಮಾತ್ರ ಅವರು ತೇರ್ಗಡೆ ಹೊಂದಬೇಕಾಗಿರುತ್ತದೆ.

3) ಸರ್ಕಾರಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 3 ಎಸ್‌ಎಸ್‌ಆರ್ 82, ದಿನಾಂಕ 30ನೇ ಆಗಸ್ಟ್ 1982ರ ಮೇರೆಗೆ ಅಂಧರಾಗಿರುವ ಮತ್ತು ಕೆಲಸಕ್ಕೆ ಓದುವುದು ಮತ್ತು ಬರೆಯುವುದು ಅವಶ್ಯವಿಲ್ಲದ ಸರ್ಕಾರಿ ನೌಕರರಿಗೆ ಸ್ಥಿರೀಕರಣದ ಮತ್ತು ವಾರ್ಷಿಕ ವೇತನ ಮುಂಬಡ್ತಿಗಳನ್ನು ಪಡೆಯುವ ಉದ್ದೇಶಗಳಿಗಾಗಿ ಕನ್ನಡ ಭಾಷಾ ಲಿಖಿತ ಸೇವಾ ಪರೀಕ್ಷೆಯಲ್ಲಿ ತೇರ್ಗಡೆಯಾಗುವುದರಿಂದ ವಿನಾಯಿತಿಸಲಾಗಿದೆ. ಆದರೆ ಅವರು ಕನ್ನಡ ಭಾಷಾ ಮೌಖಿಕ ಪರೀಕ್ಷೆಯಲ್ಲಿ ತೇರ್ಗಡೆಯಾಗತಕ್ಕದ್ದು.

15. (ಅ) ಆಯೋಗದ ಆದೇಶ ಸಂಖ್ಯೆ ಇ.ಪ(2)3774/94–95/ಪಿಎಸ್‌ಸಿ ದಿನಾಂಕ 18ನೇ,ಫೆಬ್ರವರಿ 1995ರ ಮೇರೆಗೆ ಬ್ಯಾಟರಿ ಚಾಲಿತ ಪ್ರೋಗ್ರಾಮ್ ಮಾಡದೆ ಇರುವಂತಹ ಕ್ಯಾಲುಕ್ಯುಲೇಟರ್‌ಗಳನ್ನು ಎಸ್.ಎ.ಎಸ್ ಪರೀಕ್ಷೆಗಳಲ್ಲಿ ಉಪಯೋಗಿಸಲು ಅಭ್ಯರ್ಥಿಗಳಿಗೆ ಅನುಮತಿ ನೀಡಲಾಗಿದೆ.

(ಆ) ಪರೀಕ್ಷಾ ಕೇಂದ್ರಗಳಿಗೆ ಮೊಬೈಲ್ ಫೋನ್‌ಗಳನ್ನು ತರುವುದು ಮತ್ತು ಉಪಯೋಗಿಸುವುದನ್ನು ಕಡ್ಡಾಯವಾಗಿ ನಿಷೇದಿಸಲಾಗಿದೆ.

16. **ತೇರ್ಗಡೆ ಪ್ರಮಾಣ ಪತ್ರಗಳು:**

ಪ್ರತಿಯೊಂದು ವಿಷಯಕ್ಕೆ ತೇರ್ಗಡೆ ಪ್ರಮಾಣಪತ್ರವನ್ನು ಆಯೋಗದಿಂದ ಫಲಿತಾಂಶವು ಅಧಿಕೃತವಾಗಿ ರಾಜ್ಯಪತ್ರದಲ್ಲಿ ಪ್ರಕಟವಾದ ನಂತರ ಅಂಚೆಯ ಪ್ರಮಾಣಪತ್ರ (Certificate of Posting) ದ ಮೂಲಕ ಕಳುಹಿಸಲಾಗುವುದು. ಪ್ರಮಾಣ ಪತ್ರದಲ್ಲಿ ಮುದ್ರಿತವಾದ ಹೆಸರು ಅಥವಾ ಇನ್ನಾವುದೇ ರೀತಿಯ ತಪ್ಪುಗಳು ಕಂಡುಬಂದಲ್ಲಿ ಅಭ್ಯರ್ಥಿಗಳು ಕೂಡಲೇ ತಿದ್ದುಪಡಿಗಾಗಿ ಸೂಕ್ತ ದಾಖಲೆಗಳೊಂದಿಗೆ ಆಯೋಗದ ಕಛೇರಿಯನ್ನು ಸಂಪರ್ಕಿಸುವುದು.

(ಸೂಚನೆ: ಪರೀಕ್ಷೆಯ ಪ್ರತಿಭಾಗವನ್ನು ಈ ಉದ್ದೇಶಕ್ಕೆ ಒಂದು ಪ್ರತ್ಯೇಕ ಪರೀಕ್ಷೆ ಎಂದು ಪರಿಗಣಿಸಲಾಗುವುದು)

**ಅಂಕಪಟ್ಟಿಗಳು:** ಇಲಾಖಾ ಪರೀಕ್ಷೆಯ ಎಲ್ಲಾ ಅಭ್ಯರ್ಥಿಗಳ ಅಂಕಗಳನ್ನು ಆಯೋಗದ ವೆಬ್ ಸೈಟ್ **http://kpsc.kar.nic.in** ನಲ್ಲಿ ಫಲಿತಾಂಶ ಪ್ರಕಟವಾದ ದಿನಾಂಕದಂದೇ ಪ್ರಕಟಿಸಲಾಗುವುದು ಪ್ರತ್ಯೇಕವಾಗಿ ಅಂಕಪಟ್ಟಿಗಳನ್ನು ನೀಡಲಾಗುವುದಿಲ್ಲ.

17. **ಅಂಕಗಳ ಮರು ಎಣಿಕೆ:**

ಎ) ಯಾವುದೇ ಪರೀಕ್ಷೆಯಲ್ಲಿ ಅನುತ್ತೀರ್ಣನಾದ ಅಭ್ಯರ್ಥಿಯು ಫಲಿತಾಂಶ ಪ್ರಕಟವಾದ ದಿನಾಂಕದಿಂದ 30 ದಿನಗಳೊಳಗಾಗಿ ಸದರಿ ಪರೀಕ್ಷೆಯ ಎಲ್ಲಾ ಪತ್ರಿಕೆಗಳ ಅಥವಾ ಯಾವುದೇ ಪತ್ರಿಕೆಯ ಅಂಕಗಳ ಮರು ಎಣಿಕೆಗಾಗಿ ಆಯೋಗಕ್ಕೆ ಅರ್ಜಿ ಸಲ್ಲಿಸಬಹುದು, ಅಂತಹ ಅರ್ಜಿ ಸಲ್ಲಿಸುವ ಪ್ರತಿಯೊಬ್ಬ ಅಭ್ಯರ್ಥಿಯು ಪ್ರತಿ ವಿಷಯಕ್ಕೆ **ರೂ. 100/–** ಗಳನ್ನು ಕಾರ್ಯದರ್ಶಿ ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಇವರಿಗೆ ಸಂದಾಯವಾಗುವಂತೆ ಪಡೆದ ಡಿಡಿ/ಐಪಿಓ ಮೂಲಕ ಸಂದಾಯ ಮಾಡತಕ್ಕದ್ದು ಮತ್ತು ಅಂತಹ ಮೊತ್ತವನ್ನು ಸಂದಾಯ ಮಾಡಿದ ಪುರಾವೆಯನ್ನು, ತನ್ನ ಹೆಸರು, ನೋಂದಣಿ ಸಂಖ್ಯೆ ಮತ್ತು ಮರು ಎಣಿಕೆ ಮಾಡಬೇಕಾದ ವಿಷಯದ ವಿವರಗಳನ್ನು ಅರ್ಜಿಯೊಂದಿಗೆ ಒದಗಿಸತಕ್ಕದ್ದು.

